ವಿಲಾಸಾಸ್ಪದಮುಂ, ಘನತರಕ್ಷುಧಾವನಸರಕೃಷ್ಣಸಾರವ್ಯಾ೧ವೃತಿಯಾ೧ಗಿಯುಂ ಲುಬ್ಧಕಕುಲಕ್ಷಣವ್ಯಾಪಾರಸಂಗತಮುಂ, ವಿರಾಜಿತಾಮ್ರಶ್ರೀಯುಕ್ತಮಾಗಿಯುಂ ಕಪಿಶತಾಲಂಬಿತಮುಂ, ಸರ್ವದಾರೂಪಶೋಭಿತಮಾಗಿಯುಮುತ್ತನುಶೋಭಾಸ್ಪದ ಮೆನಿಸಿರ್ದುದಂತುಮಲ್ಲದೆಯುಂ;

ಚಂಪಕ

ಹಿಮನಗದಂತೆ ಮೇಣ್ದು ಸದಾಮಹಿಮಾನ್ವಿತಮಸ್ತಶೈಲದಂ
ತೆಮಳಿನವೃದ್ಧಹಂಸಯುತಮಿಂದ್ರಹರಿದ್ಗಿರಿಯಂತನಂತರ-
ತ್ನಮಹಿತಮಾದಿತೇಯನಗದಂತೆ ಸುರಾಗಗಣಾವೃತಂ೨ ಮನೋ
ಜ್ಞಮಲಯಭೂಧ್ರದಂತೆ ಮೃದುಯಾನಮುರುಪ್ರಚಿರಂ ಮಹೀಧರಂ ೩೫

ಕರಮೆಸೆದತ್ತು ದೇವನಗ೩ದಿಂ ಬನದಿಂ ಬಿನದಂಬಡುತ್ತೆ ಸಂ
ಚರಿಪ ನಭಶ್ಚರಪ್ರಕರದಿಂ ಝರದಿಂ ನೆರೆದಂಬುವೆತ್ತ ಕಿಂ
ನರಕುಲದಿಂದೆ ರನ್ನಗವಿಯಿಂ ಪವಿಯಿಂ ಸವಿಯಿಂ ಪೊದಟ್ದಿ ಕಿಂ
ಪುರುಷರ ಗಾನದಿಂದೆ ಖಗದಿಂ ಮೃಗದಿಂ ನಗದಿಂದೆ ಕಂದರಂ ೩೬

ನಿಡುಜೆಡೆ ಬೆನ್ನೊಳಾಡೆ ಕಳಕಾಂಚಿ ಝಣತ್ಕೃತಿ ಪೊಣ್ಮೆ ತಳ್ತ ಪೊನ್ನ
ಗೊಡವೊಲೆಗಳ್ ಕದಕ್ಕದಿಸೆ ಪೀವರವೃತ್ತನಿತಂಬಮಂಡಲಂ
ಪೊಡರೆ ಮುಖಾಂಶುನೇತ್ರರುಚಿ ಪರ್ಬಿ ಪಳಂಚೆ ನಗಾಗ್ರದಿಂದೆ ದಿಂ
ಕಿಡುತೆ ನಭೋಂತದೊಳ್ ವಿಹರಿಪರ್ ಖಚರಾಂಗನೆಯರ್ ವಿಲಾಸದಿಂ ೩೭

ಸುರಧನು ರನ್ನವಲ್ಲಣದ ಮಾಟ್ಕೆಯೊಳೊಪ್ಪಿರೆ ಬಳ್ಳಿಮಿಂಚು ವಿ
ಸ್ಫುರಿತಮಲೀನದಂತಿರೆ ಘನಧ್ವನಿ ಹೇಷಿತಮಾಗೆ ತುಂಗವಾ
ರ್ಧರಮದು ತೋಱೆ ನೀಲತುರಗಂಬೊಲ್ದಂ ಪದೆದೇಱೆ ಮೀಱೆ ನಿ
ರ್ಭರದ ಗತಿಪ್ರಪಂಚಮನೊಡರ್ಚುವರಚ್ಚರಿಯರ್ ಸುರಾಧ್ವದೊಳ್ ೩೮

ಶಾರ್ದೂಲ

ಮಿಂದಂತಾಗಿರೆ ಮೆಯ್ ಮರಂದರಸದಿಂ ಪೂಗೊಂಚಲೊಳ್ ಪೊಕ್ಕು ೪ನ
ಣ್ಪಿಂದಂ೪ ಕಂಪಿಡಿದೊಳ್ಪ೫ರಲ್ದೆಱೆದು ಮಂದಾರಾದಿಭೂಜಂಗಳೊಳ್
ತಂದೊಳ್ಪಿಂ ಸಮೆದಚ್ಚಪೂದೊಡವನೋರಂತಿಟ್ಟು ನಾನಾವಿಳಾ
ಸಂದೋಱುತ್ತೆ ನಿಯರ್ಗೆ ರಂಜಿಪುದಜಸ್ರಂ ಖೇಚರೀಸಂಚಯಂ ೩೯

---

೧–೧ ವೃತ್ತಿಯಾ (ಗ); ಪ್ಲುತಿಯಾ (ಚ); ಪೃತಿಯಾ (ವ) ೨ ಣಾನ್ವಿತಂ (ಯ) ೩ ದೇವವನ (ರ) ೪–೪ ನ। ಲ್ಪಿಂದಂ (ರ, ಲ) ೫ ದುಳ್ಪರ (ಯ)

ಉತ್ಪಲ

ಕಿಂನರಿಯೆಂಚರಂಬಿಡಿದು ನುಣ್ಚರದಿಂ ಸವಿ ಸೂಸೆ ಪಾಡುವಾ
ಕಿನರಿಯಂಕದೊಳ್ ನಸುಮುಗುಳ್ಚಿದ ಕಣ್ ಕಡೆವಾಯ್ದು ದೂರ್ವೆ ಚೆ
ಲ್ವಿಂ ನಿಮಿರ್ದಂಗವಸ್ತಿ ದ ಕ್ಕೊಡಂಕೆ ಜವಂಗೆಡದೇಟ್ವ ರೋಮಹ
ರ್ಷಂ ನೆಱೆ[೧]ಯೊಪ್ಪಿನಲ್ಗೊಣಸು ಪಟ್ಟಿಸೆದಿರ್ದುದದೊಂದು ತಾಣದೊಳ್ ೪೦

ಚೆಂದಳಿರ್ದೊಂಗಲಿಂ ಮಿಸುಪ ಶೋಕೆ ಫಲಾವಳಿ ತೀವಿ ತೋರ್ಪ ಮಾ
ಕಂದಮರಲ್ಗಳಿಂ ಪುದಿದ ಚಂಪಕಮುದ್ಗಮಮಂಜರೀವಿಳಾ
ಸಂದಳೆದಿರ್ಪ ಮಾಧವಿ ಮುಗುಳ್ತೊಱಗಿರ್ದ ಮನೋಜ್ಞ ಮಲ್ಲಿಕಾ
ಬೃಂದಮನೂನಪುಷ್ಪ ಚಯಮೊಪ್ಪಿರೆ ನಂದನದಲ್ಲಿ ರಂಜಿಕುಂ ೪೧

ಚಂಪಕ

ಘನವಿಕಚಪ್ರಸೂನಹಸನಂ ಮಿಗೆ ಬಾನ್ಗೊಗೆದೆಟ್ಟು ನೀಟ್ದ ಕೊಂ
ಬೆನಿಪ ಭುಜಾಗ್ರಮಂ ನೆಗೆಪಿ ಚಂಚಲಪಲ್ಲವಪಾಣಿಯಿಂ ಪಿಕ
ಸ್ವನಮುದ್ದೊಪ್ಪೆ ಕೂಗಿ ಪೊಣರಲ್ ಕರೆವಂತೆಸೆಗುಂ ಸುರೇಂದ್ರನಂ
ದನಮರಮೆಯುಂ ತದದ್ರಿತಟನಂದನಲಕ್ಷ್ಮಿ ವಿಲಾಸದೇಱಿ[೨]ಯಿಂ ೪೨

ವಚನ

ಮತ್ತಮಲ್ಲಿ, ಸಾಂದ್ರಮಕರಂದರಸಭರಭರಿತಸುರಭಿಯುತವಿಕಚಕುಸುಮಮಂಜು ಮಂಜರೀಪುಂಜ[೩]ದೊಳರದೆಱಗಿ[೩] ಪೊಱಮಡದೆ ನಿಲುಂಬಿ ನಿಂದು, ನಿಬಿಡಮೆನೆ ಮುಸುಂಕಿದ ಮಧುಮುದಿತಮಧುಕರಪ್ರತಾನ[೪]ದಿಂ ಶ್ಯಾಮಳತೆವೆತ್ತು ನಿಜಮೂಲ ದೊಳ್ ಬಳಸಿ ತಳಿರ್ತ ಚೆಂದಳಿರ್ಗಳೆಸೆಟ್ಟ ಪೀತಾಂಬರದಂತಿರೆ, ಕಳಕಂಠಕಳರವಂ ಪಂಚಮದಱ[೫]ಬಂಚರ[೫]ದಿಂಚರಮೆನಿಸೆ, ಸರಭಸಂ ಪರಿತಂದು ಚಕ್ರಾ[೬]ನಿಲನಲೇ[೬]ದೊ ಲೆದೆತ್ತಿದರ್ದಲ ಪರಾಗಪಟಲಂ ಮೇಲೆ ಪರಿಕಲಿಸಿ ಪರ್ಬಿ, ಬಿತ್ತರಮಾಗಿ ಪತ್ತುಗೆ ಗೊಂಡೆತ್ತಿದ ಗೋವರ್ಧನಗಿರಿಯ ಪಿರಿಯ ಸಿರಿಯನೊಳಗುಗೊಳಿಸೆ, ಸಾಕ್ಷಾತ್ ಕೃಷ್ಣ ನಂತೆ ಕಣ್ಗೆವಂದ ರಸಾಲರಸಾರುಹಮುಂ; ಪಚ್ಚೆವರಲ್ಗಳಂತೆಸೆವ ಪಸಿರ್ಮಿಡಿಗಳಿಂ, ಕೆಂ ಬರಲೆಂಬಂತೆ ಸಾರತರಮಾದ ದೋರೆವಣ್ಗಳಿಂದಿಂದ್ರನೀಲದಿಂದಂಬಡೆದು ವಿಲಸಿದ ಮಾದ ಕಳಿ[೭]ವಣ್ಗಳಿಂ ಮಣಿಗಣಮೆನೆ ಕಾಯ್ತೊಱಗುವ ಕಲ್ಪಕುಜದಂತೆ ರಾಜಿ[೮]ತ ಮಾದ ರಾಜಜಂಬೂಕುಜಮುಂ; ಧರಾವಧು ಮುಱಿಗಱಿದು ಮುನ್ನಂ ತನ್ನನೋವಿದ ಲೇಸನೋಸರಿಸದೆ ನೆನೆನೆನೆದು ಜೀಮೂತವಾಹಂಗೆ ನಿಜಸುಧಾರಸಮಂ ಮರಕತ ಕಳಶದೊಳ್ ತೀವಿ ನಿಡುದೊಳಂ ನೆಗೆಪಿ ಮೇಗಣ್ಗೆ ನೀಡುಂ ನೀಡಿದಪಳೆಂಬಂತೆ

---

೧ ನೆಱೆದೊ (ಯ, ರ, ಲ) ೨ ಯುಕ್ತ (ರ) ೩-೩ ದೊಳೆರಗಿ (ಯ) ೪ ಪ್ರಕರ (ಜ, ವ); ಪ್ರತಾಪ (ರ) ೫-೫ ಬಂಚ (ಯ) ೬-೬ ನಿಲನಲೆ (ಯ, ಲ); ನಿಲನಿಂ (ಜ) ೭ ಕಳಿತ (ಜ, ಕ) ೮ ವಿರಾಜಿ (ಜ)

ರಂಜಿಪ ನಾರಿಕೇಳಮುಂ; ರತ್ನಗರ್ಭೆ ತನ್ನ ಸಿರಿಯಂ ಖಚರರ್ಗಱಿಪಲೆಳಸಿ ಮರಕತ ಮಣಿಯ ಚಲ[೧]ಗುಚ್ಛಂಗಳಂ[೨] ತೋರಣಂಗಟ್ಟಿದಂತೆ ಪಸಿರ್ಗಾಯ್ಗೊಡಂಬೆಗಳಿಂ ಕಣ್ಗೊಳಿಪ ಕೌಂಗುಮರಂಗಳುಂ; ವಿಜಯಯಾತ್ರೆಗೆ ತಳರಲುಜ್ಜುಗಿಪ ಮಕರಧ್ವಜ ಮಹಾರಾಜಂಗೆ ಶುಭಮುಹೂರ್ತದೊಳ್ ಮಧುಸಚಿವನಂಬಱಿದು ಪೊಯ್ದಿಂದ್ರ ಗೋಪದ ಗೂಡಾರದಂತೆ ಕಾಂತಮಾದ ಕೆಂದಳಿರ್ ತೀವಿದ ಕಂಕೇಲ್ಲಿಯುಂ; [೩]ಬನಂಬೊಕ್ಕು[೩] ಬಾಯ್ವಿಡುವ ಬಿರಯಿಗಳ ಬಿಸುಸುಯ್ ಸುಡೆ ಬಿಕ್ಕನೆ ಬಿರಿದ ರತಿಪತಿಯ ಮಣಿಕರಂಡಕದ ಚೆಲ್ವಂ ತಳೆದು ಬೀಡೆವಿರಿದು ಬಿಟ್ಟಂ[೪] ಸೂಸುವ ಪಣ್ಗಳಿಂ ಸಂಗಳಿಸಿದ ದಾಡಿಮಂಗಳುಂ; ಪೂವಲಿಯಂ ಕೆದರ್ದು ಲತಾನರ್ತಕಿಯರಾಡೆ, ಮಧುಕರಂಗಳ್ ಪಾಡೆ, ಕಳಕಂಠ[೫]ಕಾಹಳಿಕಾ[೫]ರವಂ ವಿಜೃಂಭಿಸೆ, ಶುಕನಂದಿ ವೃಂದಂ ಪೊಗೞೆ, ಗಂಧವಾಹಂ[೬] ಸುಗಂಧಸಾರಮನುಪಾಯನಂಗೆಯ್ಯೆ, ಮಧು ಸಚಿವಂ ಮೆಯ್ವೆರ್ಚಿ ಬೆಸನಂ ಸಾರ್ದು ಸಂಮುಖದೊಳ್ ಸಂಭ್ರಮಿಸಿ ನಿಲೆ, ಮಾಕಂದಾದಿಸುಭಟರ್ ನಿಜಾಸ್ತ್ರಂಗಳಂ ಪಿಡಿದು ಬೞಿಸಂದು ಬಳಸಿ ನಿಂದೋಲಗಿಸಿರೆ, ಸುರಯಿಯ್ಸುರಲ ಪರಾಗಪುಂಜದ ಪೊಂಜಗಲಿಯೊಳ್ ಪಸರಿಸಿದ ಕುಸುಮವಿಸರದೆಸಳ ಪೊಸಪಸೆಯೊಳೊಸಗೆ ಮಿಗೆ ರತಿಯುವತಿವೆರಸು ಗಾಡಿಯಿಂ ಕುಳ್ಳಿರ್ದ ಮದನಮಹೀರಮಣನ-ನಯನೋತ್ಸವಕ್ಕೆ ಕಟ್ಟಿದಿರೊಳ್ ಸರಿಯೂಡಿನ ಜಿಱಿಸುಗಟ್ಟಿ ರಚಿಸಿದ ಕುರುಜೆಂಬಂತಿರಲ್ಲಲರ್ವಡಿಯಂ ಸೂಸುವ ಕನಕರುಚಿನಿಚಿತ್ರಸುಮನೋಗಣದಿನಲಂಕೃತಿವೆತ್ತು ಸೊಂಪುಗಱಿವ ಚಂಪಕಪ್ರತಾನಮುಂ; ತನ್ನಂ ಪೊತ್ತು ಮನ್ನಣೆಯಿಂ ಮುನ್ನಂ ಪೊರೆಯೇೞ್ಸಿಸಿ ಪೊರೆದ ಮಣಿಗರ್ಭೆಗಣ್ಡೆಯುರಂ ಬಾಗಿ ಒಳ್ಪಿ ಮಣಿವ ಮಾೞ್ಕೆಯಿಂ ಪಣ್ತು ಬಿಣ್ಗೊನೆಯಿಂದ್ಜೆಱಗಿ ನಿಂದ ರಾಜಕದಳಿಗಳುಂ; ನಿಜೈಕಫಲದಿಂ ಪಲಂಬರಂ ತಣಿಪಲ್ ಸಮರ್ಥಮಾಗಿ ಬಹುಫಲಂಗಳಿನೊರ್ವನಂ ತಣಿಪು[೭]ದನ್ಯವನ್ನ[೭] ತರುಗಳುಂ; ನಿಜಸುರಭಿಗೆಱಗುವ ಪಱಮೆವಱಿಧುಱುಗಲನಱಿರವವ್ಯಾಜದಿಂ ನಕ್ಕಪುದಿನಿಸಿ, ಸುಜನನಂತೆ ಬಹುಕಂಟಕಂಬಡೆ[೮]ದಿರ್ದು ಮನ್ಯರ್ಗೆ[೮] ಹಿತಮಂ ಸಾರ್ಚಲೆಳಸುವ ಫಲಂಗಳಿಂ ತಳ್ತಬೆಕ್ಕೆವೆಲಸುಗಳುಂ; ನಂದನದೊಳ್ ದಂಬಡೆದು ನಲಿದಾಡುವ ಕಲಾಪಿಗಳ್ಗೆ ಕೆಳೆತನಕ್ಕೆಟ್ಟಿಂದು ನಿಂದ ಕಾಮುರ್ಗಿಲಂತೆ ಪೆರ್ಮೆವಡೆದ ತರುಣತಮಾಲತರುಗಳುಂ; ವನವನಧಿಯ ಬಡಬಶಿಖಾವಹನೆನ್ನೆ ಮನೋಜ್ಞಮಾಗಿ ಪೂತೊಱಗುವ ಕಿಂಶುಕಸಮುದಯಮುಂ; ತರ್[೯]ಜೆಲಕೆಂಬ ಪೊಂಬರದನೆಲಪೊರ್ನ್ನಂ ಪಣ್ಗಕರ್ಪೊಱಪಲದೊಳೊರೆಯೆ ಸುರಿದು ಪರಿದ ಪೊರೆಬು ಡಿಯೆಂಬಂತೆಂಬುವೆತ್ತ ರಜನೀರಜಃಪಿಂಜರರಜೋಗುಣದಿಂ ಸುರುಚಿರಮಾದ ಸುರ

---

೧ ಚೆಲ್ವ (ಚ) ೨ ಗುಚ್ಛಂಗಳಿಂ (ಯ) ೩-೩ ಬನಮಂ ಪೊಕ್ಕು (ಚ) ೪ ಬೀಜಂ (ಗ, ತ, ವ) ೫-೫ ಕಹಳೀಕಳ (ಯ) ೬ ವಹಂ (ಕ, ಚ, ತ) ೭-೭ ವನ್ಯ (ಯ, ರ) ೮-೮ ದಿರ್ದ ಮನುಜರ್ಗೆ (ಕ) ೯ ತೆಂ (ಯ)

ಯ್ಯಿಯುಂ; ಪೊಂದಳಿಗೆದೋರಣಮನೋರಣದಿಂ ಕಟ್ಟಿದಂತೆಲರ್ದ ಕುಸುಮಂಗಳಿಂ ಕಣ್ಗೊಳಿಪ ಕರ್ಣಿಕಾರಂಗಳುಂ; ಕುಮುದಾಮೋದದೊಳ್ ಪೊರೆದ ಹಿಮಕರ ಸುಧಾಕಿರಣದ ತಿರುಳಂತೆ ರಮಣೀಯಮಾದ ಪರಿಮಳದ ಪಗಿನಮಂ ಕಂದರ್ಪ ೨ಸಹಚರಂ ಪರಿಸುವ೨ ಕರ್ಪೂರಕದಳಿಗಳುಂ; ಗಿಳಿ ಕರ್ದುಂಕೆ ಸುರಿವ ಪರಿಪಕ್ವಫಲ ರಸದಿಂ ನೆಲ್ಲನೆಲ್ಲಮಂ ಪರ್ಬಿ ಪಸರಿಸಿ ಪದಂಗೊಳಿಪ ಸರಸತರದ್ರಾಕ್ಷಾಲತೆಗಳುಂ; ಭ್ರಮರನಿವಹದ ಪುರಾಕೃತಪುಣ್ಯದ್ರುರುಳ್ಗಳಂತೆಸೆವ ಬಿರಿಮುಗುಳ್ಗಳಿಂ ಸಲ್ಲಲಿತ ಮಾದ ಮಲ್ಲಿಗೆಗಳುಂ; ಮಧುರಸಾಸಕ್ತಮಧುಕರವ್ರಜಮಧುರರವವ್ಯಾಜದಿಂ ಮಧುವಂ ಕಱೆದು ಬನಸಿರಿಯೊಳ್ ನೆರೆಪ್ಪಿ ಮಧುದೂತಿನಾಮಮುಮಂ ಸಾರ್ಥಕಂ ಮಾಳ್ಪ ಮಾಧವಿಯುಂ: ಬನಗ್ಗಟ್ಟಿಲೆಯ ಬಂದಿಗೊಳಗಾದ ಕಮಲಾಕರಹಿಮಕರ ನಕ್ಷತ್ರಯ್ಯಲೆಱೆತಂದ ತಾರೆಗಳಂ ಪೋಲ್ವ ಪೂಗಳಿಂ ತಳ್ತ ಯೂಥಿಕೆಗಳುಂ; ಬಿರಯಿ ಗಳ್ಪರಮಂ ನಟ್ಟುರ್ಚಿ ರುಧಿರಂಬೊರೆದ ಮದನಶರವಿಸರದಂತೆಸೆವ ನವಕುಸುಮ ಸಂದೋಹದಿಂ ಬಂಧುರಮಾದ ಬಂಧುಗೆಯುಂ; ಭೃಂಗಭುಜಂಗನಪ್ಪಿ ಚುಂಬಿಸೆ ತೊಟ್ಟನೆ ತೊರೆದ ಬ್ರಾಯ್ದೆರೆಯಂತೆ ಬಗೆಗೊಳ್ವ ಮಧುರಮರಂದಮಂ ತುಳ್ಕುವಲ ರ್ಗಳಿಂ ಲಲಿತಮಾದ ಮಾಲತಿಯುಂ; ಹರವಿರೋಧಿಯೆಂದೀನ್ನಂ ಬನಸಿರಿ ಬಹಿಷ್ಕರಿಸಿ ಮುಗುಳ್ದಿಸನ್ನನಪ್ಪ ಕಂತುವನೆಂತೊಳಕೊಂಡಳೆಂದು ಕನಲ್ದು ಪಲ್ಮೊರೆವಂತೆ ನಿಜಸುಮನಃಪರಿಮಳಮಿಳದ್ಭ್ರಮರಕುಳಕಳಕಳದಿಂ ಕಲಿತಮಾದ ಕೇತಕಿಯುಂ; ಪಿಂಗದೆ ಕಣ್ಗೊಳಿಸಿ ಪೆಂಪನಾಳ್ದ ತಣ್ಪಿನ ತವರ್ಮನೆಯುಂ, ಕಂಪಿನ ಕಾರಾ ಗಾರಮುಂ, ಭ್ರಮರಗಣಪ್ರಪಾಮಂಟಪಮುಂ, ಮದನನ ಜೇವಣಶಾಲೆಯುಂ, ಮದಕಳಾಪಿಗಳ ಲಾಸ್ಯರಂಗಸ್ಥಳಮುಂ, ಕೆಂಗಣ್ವಕ್ಕಿಗಳ ಸಂಗೀತಸದನಮುಂ, ಮಲಯಾನಿಲನ ವಿಹಾರವೀಥಿಯುಂ, ಶುಕದ್ವಿಜಂಗಳಧ್ಯಯನಸದ್ಮಮುಂ, ಚೈತ್ರ ರಾಜನ ರಾಜಧಾನಿಯುಂ, ಮದನಮಹೀಪತಿಯ ಮಹಾಶಿಬಿರಮುಂ, ವನಲಕ್ಷ್ಮಿಯ ವಿನೋದಮಂದಿರಮುಮೆನಿಸಿ, ಸುಮನೋಜನಮನೋಜ್ಞತರಮೆನಿಸಿ ಗಿರಿಕಟಕ ನಂದನಂ ಮುದಂಬೆತ್ತು ಕಣ್ಗೊಳಿಸಿರ್ದುದಂತುಮಲ್ಲದೆಯುಂ;

ಚಂಪಕ.

ಅಳಿಕುಲಮಿಂದ್ರನೀಲಮಣಿ ಪಚ್ಚೆ ಪಸಿರ್ವಿಡಿ ತಳ್ತ ಮಲ್ಲಿಕಾ
ಸುಳಲಿತಸ್ಫುಟ್ಮುಳಾಳಿ, ಪೊಸಮುತ್ತು ಕೊನರ್ ಪ್ರವಳಂ ಪೊದಱ್ದು ಸಂ
ಗಳಿಸಿರೆ ತನ್ನೊಳೊಪ್ಪಿದುದು ಮಾಮರಮಲ್ಲಿ ಮನೋಜ್ಞ ರತ್ನಸಂ
ಕುಳಮನೆ ಕಾತ೪ ಕಲ್ಪಕುಜದಂತೆ ಮರುದ್ದ ತನಂದನಸ್ಥಿತಂ ೪೩

ಮತ್ತಂ,

---

೧ ಬೆರೆದ (ಕ) ೨-೨ ಸಹಚರಂಗೆ ಪರಪುವ (ಯ) ೩ ಗೊಳಿ (ಜ, ತ) ೪ ಕಾತು (ಜ)

ಚಂಪಕ.

ತಳಿರೆಳಮಾದಳಂ ಪುದಿದ ಪೂಗುಡಿ ಜಲ್ಲಿಮಡಲ್ತ ಮಲ್ಲಿಯು
ಜ್ವಳಮುಕುಳಾಳಿ ಮುತ್ತು ಪವಳಂ ಕೊನರಾಗೆ ವನಾಬ್ಧಿಯಲ್ಲಿ ಕಣ್
ಗೊಳಿಪ ಪತಂಗು ಮಾಮರಮದಾಗಿರೆ ಕೋಗಿಲೆ ನಟ್ಟಿಗೊಂಬಿನೊಳ್
ತಳೆದುದು ಕೂವಕಂಬಧುದಿವತ್ತಿದ ನಾವಿಕನೊಂದು ಲೀಲೆಯಂ ೪೪

ಕಳಕಂಠಂಗಳ ಬಗ್ಗಣೆ
ಗಿಳಿಗಳ ಚಪ್ಪರಣೆಯಳಿಗಳಿಂಚರಮೆಸೆಗುಂ
ತಳಿರ್ಗಳ್ ತನಿವಣ್ಗಳ್ ಸುಮ
ಕುಳಂಗಳಿಡುಕಿಱಿದ ಚೂತಶಾಖಾಂತರದೊಳ್ ೪೫

ಉತ್ಪಲ.

ಕಾಮನ ಸಾಮಜಂ ಮಧುಮಹೀಶನ ಕೋಶಗೃಹಂ ಮಧುವ್ರತ
ಸ್ತೋಮದ ಪಾನಭೂಮಿ ಮಲಯಾನಿಲನಾಡುವ ಮಾಡುವೆಟ್ಟು ವ
ಲ್ಲೀಮೃದುಲಾಸ್ಯಶಾಲೆ ಶುಕವೃಂದದ ಜೇವಣದಾಗರಂ ಬೞಿ
ಕ್ಕೀ ಮರಮಲ್ತೆ ಮಾಮರಮೆನುತ್ತ ಜನಂಬೆಟ್ಟನೊಱಲ್ದು ನಾಮಮಂ ೪೬

ಚಂಪಕ.

ಗಿಳಿಗಳ ಸಾಲ್ ಸುರೇಂದ್ರಧನು ಚೆಂದಳಿರೊಂದಿದ ಮಿಂಚು ಕೋಕಿಲಾ
ವಳಿಯ ರವಂ ಘನಧ್ವನಿಗಳುನ್ಮ್ಲಕರಂದಮೆ ವೃಷ್ಟಿಯಂತೆ ಕಣ್
ಗೊಳಿಸೆ ನಿಲುಂಬಿ ತುಂಬಿ ಕವಿವಾಮ್ರಮನಭ್ರಮೆಗೆತ್ತು ಕೇಕಿಮಂ
ಡಳಿ ಬೞಿಸಾರ್ದು ನರ್ತಿಸುಗುಮೀಕ್ಷಿಸಿ ಮರ್ಚುವಿನಂ ಮನೋಭವಂ ೪೭

ತಳಿರ್ಗಳೆ ದ್ರಳ್ಪುರಿ ಯಲರಿಂ
ಬೆಳೆದಲರ್ವುಡಿ ದೂಮ್ಪೆ ಮಂತ್ರಘೋಷಂ ಪಿಕಸಂ
ಕುಳರವಮೆನೆ ಚೂತಂ ಕಣ್
ಗೊಳಿಪುದು ಹೋಮಾಗ್ನಿಯಂತೆ ಕಾಮಾಧ್ವರಿಯಾ ೪೮

ಮತ್ತೇಭ.

ತನಿವಣ್ಣಂ ಮನವಾರೆ ನೋಡಿ ಬೞಿವಂದೊಲ್ದಪ್ಪಿ ಪಕ್ಕಂಗಳಿಂ
ದನಿದೋಱುತ್ತೊಲವೆತ್ತು ಚಂಚುಪುಟದಿಂದಂ ಮೆಲ್ಲನಿಂ ಸೀಳ್ದು ಸೀ
ಯೆನೆ ಸೊರ್ವಾಳ ರಸಧಾರೆಯಂ ಸವಿದು ಚೀತ್ಕಾರಸ್ವರಂ ಪೊಣ್ಮೆ ತ
ನ್ನಿನಿಯಳ್ಗಂ ಕರೆದಿತ್ತದಂ ತಣಿಪುಗುಂ ಕೀರಾಳಿ ಮಾಕಂದದೊಳ್ ೪೯

---

೧ ಳಮ್ಮ (ರ) ೨-೨ ಯೆಲರಿಂ। ಕಳಿ (ಯ) ೩ ದೂನೆ (ಕ, ಜ, ತ); ಧೂಮ (ರ)
೪ ಸಾರ್ವಾ (ಚ)

ಚಂಪಕ

ಸುೞಿದುದು ಬಾೞಿನುಣ್ಬೊಡೆಯನೆಪ್ಪುತೆ ಕಂಪನಮಂ ನಿಮಿರ್ಚಿ ಸಾ
ಗದರ್ೞವಿ ಸುಗಗುಚ್ಛವೆಂಬ ಮೊಲೆಯಂ ಮಧುಘರ್ಮಕಣಾಳಿಯಂ ಪದಂ
ಗೊಳಿಸಿ ಲತಾಂಗಮಂ ಪದೆದು ಸೋಂಕಿ ನವಾಂಕುರರೋಮಹರ್ಷಮಂ
ಬಳೆಯಿಸಿ ತದ್ವನಸ್ಥಳಿಗೆ ಕಾಮುಕನಂತಿರೆ ಮಂದಮಾರುತಂ ೫೦

ನೆಗೆದೊಗೆದೇಱ್ವ ಬಾಳೆ ಸೆಳೆಮಿಂಚು ಸರೋಜರಜಃಪಿಶಂಗವು
ಧ್ಯಗತತರಂಗವಬ್ಜದಳಸಂಗತಷಂದ್ರಶರಾಸನಂ ಪಯಃ
ಖಗರುತಿಘೋಷವಾಗೆ ಗಿರಿಶೃಂಗತಟಾಹತವಲ್ಲಿ ಬಿಱ್ದ ದೋ
ಮುಗಿಲೆನೆ ದಂತಿದಾನರಸಮೋಚಕಿತಾಂಬುಪರಂ ವಿರಾಜಿಕುಂ ೫೧

ಸ್ಫುರಿತಶಿಲೀಮುಖವುತ್ಪಳ
ಸರಕ್ತಕಂಜಾತಯುತವನುಪಾತ್ತಕಬಂಧಂ
ಶರಭಂಗಾನ್ವಿತವೆರಥನು
ಕರಿಸಿದುದಾ ಬನದ ತಿಳಿಗೊಳಂ ಕೊಳುಗುಳವಂ ೫೨

ಚಂಪಕ

ಮಿಸುನಿಯ ಕಾಸೆವೊಲ್ ಮಿಸುಗೆ ಕಂಜರಜಂ ಪೊಳೆದೊಪ್ಪೆ ಬಾಳೆಗಣ್
ಬಿಸಜಮುಖಂ ಮರುಚ್ಚಳಿತವೊಂದೆ ತರಂಗಭುಜಾಬ್ಜಪಾಣಿ ರಂ
ಜಿಸೆ ಚಲವುಬ್ಜಕೋಶಕುಚವಲ್ಲಿ ಕದಕ್ಕದಿಸುತ್ತೆ ತೋಱೆ ಕ
ಣ್ಗೆ ಸರಸಿ ನರ್ತಿಪಂತೆಸೆದುದುಂಡ ಭ್ರಮರಧ್ವನಿಕಿಂಕಿಣೀರುತಂ ೫೩

ಸ್ಮರಶಸ್ತ್ರಸದನವೆಂದಿರ್ಪ
ಯುರಮನೆಯುಳಿಗ್ಗಣದ ಶಾಶ್ವತಪ್ರಪೆ ಕೋಕೋ
ತ್ಕರದ ಸುರತಾಲಯಂ ಭಾ
ಸುರಮುಂದಾನಿಲನ ಕೋಶವಾ ಕಾಸಾರಂ ೫೪

ಮತ್ತೇಭ

ನಳಿನಂ ಶುಕ್ತಿಕೆ ತಳ್ತ ನೀರ್ವನಿಗಳೇ ನುಣ್ಮುತ್ತು ನೀರುಣ್ಬ ನಿ
ಶ್ಚಳವಾತಂಗಮೆ ತೀರನೀರದಮಹೀಂದ್ರಂ ನೀಳ್ದ ಫೇನಾಳಿ ಮಾ
ರ್ಪೊಳೆವರ್ಕಂ ಬಡಬಾಗ್ನಿ ಪೊಕ್ಕ ಕುಧರಂ ತದ್ಭೂಧರಚ್ಛಾಯೆ ಕಣ್
ಗೊಳಿಪನ್ನಂ ಕಮಳಾಕರಂ ತಳೆದುದಾ ರತ್ನಾಕರಾಕಾರಮಂ ೫೫

---

೧–೧ ದರ್ಳವಿಸಿ (ಯ, ರ)
೨ ರಸಂ (ಯ, ರ)
೩ ಚಲದ (ಯ, ರ)

ಸರ[೧]ದೊಳ್ ಮುಳುಂಗಿ ನೆಗೆಪಿದ
ಕರಿಕುಂಭಂ ಫೇನಪಿಹಿತಮಿಂಬಾದುದು ತೆ
ಳ್ದಿರೆಮೇಲುದಱಿಂ ಪೊಣ್ಮಿದ
ಸರಸಿಯ ಮಲಯುಜವಿಲಿಪ್ತಕುಚಕುಂಭದವೋಲ್ ೫೬

ಅಮುರ್ದರ್[೨] ನೆಲೆವೊಲೆಗಳೆಂ[೪]ಬವೊ
ಳಮು[೪]ಳ್ವಕ್ಕಿಗಳಿರೆ ತದಗ್ರಕಲ್ಲೋಲಸಮಾ
ಕ್ರಮಿತಾಬ್ಜಪತ್ರಮೊಳ್ದುದು
ಕಮಳಿನಿ ತೊಟ್ಟಿರ್ದ ಹರಿತಕಂಚುಕಧರವಂ ೫೭

ಚಂಪಕ

ಸರದೊಳೆ ಮಿಂದು ನೀರಜರಜಂಗಳನಂಗದೊಳೊಟ್ಟಿಕೊಂಡು ಗಾ
ವರಿಪ ಮಧಾಳಿಗಾಯಕರ ಗಾನಮನಾಲಿಸಿ ದಾನಮಿತ್ತು ಕಂ
ಧರದೆ ಮೃಣಾಳಹಾರಮನೆ ತಾಳ್ದಿ ಳಮುತ್ತನೆ ಸೂಸುವಂತೆ ಪೂತ್
ಕರಿಸಿ ಕಣಾಘಮಂ ಕೆದರ್ದುದಲ್ಲಿ ಗಜೇಂದ್ರಮಮಂದವಿಭ್ರಮಂ ೫೮

ಸಿರಿಯುರಮನೆಯುಂ ಮುಱಿದಾ
ಕರಿಯುಂ ಮುಳಿದಿಟ್ಟ ಹರಿಯ ಪಾಱುಂಬಳೆಯುಂ
ಭರವಂ ತಳೆದಳಿಮಾಲಿಕೆ
ತಿರುಗುತ್ತಿಟ್ಟಿಂದು ಕಟದೊಳೇನೆಱಗಿದುದೋ ೫೯

ಚಂಪಕ

ಪುಳಿನನಿತಂಬಮಂ ಪದೆದು ಸೋಂಕಿ ತೆರಳ್ಚಿ ತರಂಗನೀವಿಯುಂ
ವಿಳಸಿತಚಕ್ರಪಾಕಕುಚಯುಗ್ಮಮನಪ್ಪಿ ಮದಾಳಿಮಾಲೆಯಿಂ-
ಬಳಕಮನೊತ್ತಿ ನೇರ್ಪಡಿಸಿ ತತ್ಸರಸೀರಮೆಯಂಬುಜಾಸ್ಯಮಂ
ಡಳಮನೊಱಲ್ದು ಚುಂಬಿಸಿ ಭುಜಂಗನವೋಲ್ ಸುಳಿಗುಂ ಸಮೀರಣಂ ೬೦

ಉತ್ಪಲ

ಸೋಗೆದುಱುಂಬು ರಂಜಿಸೆ ಲತಾಂಗಮೆ ಸೊಂಪಡರ್ದೊಪ್ಪೆ ಮಾಣದಿಂ
ಬಾಗಿರೆ ಬಾಳೆನುಣ್ದೊಡೆ ಮನಂಬುಗೆ ಗುಚ್ಛಪಯೋಧರಂ ಬೆಡಂ
ಗಾಗಿ ವಿರಾಜಿಸಿರ್ಪ ವನಲಕ್ಷ್ಮಿಗೆ ಭೂರಮೆ ತೋರ್ಪ ದರ್ಪಣಂ
ಪೂಗೊಳನಪ್ಪುದಲ್ಲದೊಡೆ ತತ್ಪ್ರತಿಬಿಂಬಮದಲ್ಲಿ ತೋರ್ಕುಮೆ ೬೧

---

೧ ಶರ (ಕ, ತ, ರ)
೨ ಅಮುರ್ದರ್ (ರ)
೪-೪ ಬಿನ | ಮುಮು (ಯ)

ಗುರುಕುಜಸುಮನಃಸುರಭಿ
ಸ್ಫುರಿತಂ ಪ್ರಮದಾಳಿಮಂಜುಘೋಷಾನ್ವಿತಮು
ಚ್ಚರಿವೆರಸಿದ ಗಿರಿವನಮದು
ಸುರವನಮೆನೆ ಗಂಧವಾಹಪುನ್ನಾಗಯುತಂ ೬೨

ಚಂಪಕ

ಸರಸಸರೋಜಕೈರವವಿರಾಜಿ ಸರೋವರದಿಂ ಮಹಾಫಲೋ
ತ್ಕರಪರಿಣಮ್ರಭೂಜತತಿಯಿಂ ಪ್ರಮದಾಳಿಸಮುಲ್ಲಸಲ್ಲತಾಂ
ತರುಚಿರಕುಂಜಪುಂಜದಿನಲಂಕೃತಿವೆತ್ತು ಪವಿತ್ರಸತ್ರಬಿಂ
ಧುರತರಮೊಪ್ಪುಗುಂ ಸುರಭಿಮಂದಮರುತ್ರಯುತಂ ತಪೋವನಂ ೬೩

ಉತ್ಪಲ

ಪೂಗಿಡಗಳ್ಗೆ ನೀರೆಱೆವ ಪುಷ್ಪಕದಂಬಮನೆಯ್ದೆ ಕೋದು[1] ಚೆ
ಲ್ವಾಗಿರೆ ದಂಡೆಗಟ್ಟುವ ಶಿವಾರ್ಚನೆಗರ್ಘ್ಯಜಲಂಗಳೀವ ನೀ
ಡಾಗದೆ ಸಾಧನಂಗುಡುವ ಗಟ್ಟಿಮಗುಳ್ಚುವ ದೀಪವರ್ತಿಯಂ
ಸಾಗಿಪ ತಾಪಸೇಂದ್ರರ ಕುಮಾರಿಯರೊಪ್ಪುಗುಮಲ್ಲಿ ಸಂತತಂ ೬೪

ಮಹಾಸ್ರಗ್ಧರೆ

ಪಸಿದೆಯ್ತಂದುಣ್ಬುದಾ ಪೆಣ್ಬುಲಿ[2]ಯ ಮೊಲೆಯನಲ್ಲಿರ್ದ ಸಾರಂಗಶಾಬಂ
ದ್ವಿಶಿರಂ ತಾಯ್ದಪ್ಪಿ ಪಾಯ್ದೆಂಟಡಿಗೆ ಕುಟುಕನೊಲ್ದೂಡುಗುಂ ದಂತಿಪೋತ
ಪ್ರಸರಕ್ಕಂಗಾಲ್ಗಳೊಳ್ ಮುಳ್ ಮುಱಿದೊಡುಗುರ್ಗಳಿಂ ತೀರ್ಚುಗುಂ
ಸಿಂಹಪೋದು

ಬೃಸಮಂ ಸರ್ಪಾರ್ಭಕಕ್ಕಾತಪದೆ ತೊಲಗಿಕುಂ ಬರ್ಹದಿಂ ಬರ್ಹಿಬೃಂದಂ ೬೫

ರವಿ ಬಿಸುಗದಿರಂ ಕಱೆಯಂ
ದವಾಗ್ನಿ ಸವಿಧಸ್ಥಳಂಗಳೊಳ್ ಮೆಯ್ಯೊಱೆಂ
ಪವನಂ ಬಿಱುಬಿಂ ಬೀಸಂ
ಜವನವರೆಡೆಯಾಡಲಣ್ಮರಾ ಮುನಿವನದೊಳ್ ೬೬

ದೇವೇಶ ನಿಮ್ಮ ಪದರಾ
ಜೀವದ ಭಾವನೆಯ ಪೆರ್ಮೆಯೆಂತುಟೊ ಮುನಿಪರ್
ತೀವಿರ್ದ ಬನದ ಪರಿಸರ
ದೋವರಿಯೊಳ್ ಮಿಟ್ಟು ಸುಟಿಯಲ್ಲಳವುರ್ದ[3]ಜಸ್ರಂ ೬೭

೧ ಕೊಯ್ದು (ಚ, ಜ)
೨ ಪೆರ್ಬುಲಿ (ಯ) ೩ ಲಳುವುದ (ರ)

ಮತ್ತೇಭ

ಜಡೆಯಂ ಸುಂಕಿಡುವಕ್ಷಮಾಲೆಗಳನೊಳ್ಪಿಂ ಕೋವ ಯೋಗಾಂಗಮಂ
ಬಿಡದಭ್ಯಾಸಿಪ ಜನ್ನಮಂ ನೆಗಳ್ವ ಭಸ್ಮೋದ್ಧೂಳನಂಗೆಯ್ವ ಸ
ನ್ಮೃಡನಂ ಜಾನಿಪ ನಾರ ಸೀರೆಯನಲಂಪಿಂ ಮಾಳ್ಪ ವೇದಾಂತದಿಂ
ಪಡೆದರ್ಥಂಗಳನಾಲಿಪುಜ್ಜುಗದೊಳಿರ್ಕುಂ ತಾಪಸಪ್ರೋತ್ಕರಂ ೭೮

ಒಡಲಂ ಪುತ್ತುಡರ್ದೆತ್ತಲುಂ ಮುಸುಕೆ ಪಾವೆಯ್ದಾಡೆ ತನ್ಮಸ್ತಕಂ
ಬಿಡದೊಂದ್ಯನ್ನಖಪಂಕ್ತಿ ಬೇರ್ವರಿಯೆ ದೀರ್ಘಶ್ಮಶ್ರುವೊಳ್ ಪಕ್ಕಿ ಗೂ
ಡಿಡೆ ಸುತ್ತಂ ಜಡೆವಳ್ಳಿ ಪರ್ಬಿರೆ ಮೃಡಧ್ಯಾನಾಮೃತಾಸ್ವಾದನಂ
ಬಿಡೆದುದ್ಯತ್ತಪಮಾಂತು ನಿಶ್ಚಳತೆಯಿಂ ಕಣ್ಗೊಪ್ಪಿದರ್ ತಾಪಸರ್ ೭೯

ಸ್ಥಿರಪದ್ಮಾಸನದಿಂದೆ ಸರ್ವಕರಣವ್ಯಾಪಾರಮಂ ಮಾಣ್ದು ಸಂ
ಚರಣಂಬೆತ್ತು ಸುವೃತ್ತಿಯುಂ ತ್ರಡೆದುಮಾಜ್ಞಾ ಚಕ್ರಪಂಕೇಜದಿ
ಪ್ಪರಮಃಧ್ಯಸ್ಥಿತಮಂಡಲತ್ರಯದಖಂಡಜ್ಯೋತಿಯುಂ ಶುದ್ಧಭಾ
ಸುರಟಿಚ್ಚಕ್ಷುವೊಳೀಕ್ಷಿಸುತ್ತೆಯುಮಿವೃಂದಂ ತಾಳ್ದುವಾನಂದಮಂ ೮೦

ಮಹಾಸ್ರಗ್ಧರೆ

ಪದದೊಂದಂಗುಷ್ಠದಗ್ರಂ ನೆಲಸಿ ನೆಲದೊಳೊಂದಂಘ್ರಿಯಂ ಕೊಂಕಿ²ಸುತ್ತೆ
ತ್ತಿ ದುರಾಶಾಶಾಶ್ರಮಂ ನೀಟ್ಟಿರಿಸಿ ನಿಜಭುಜದ್ವಂದ್ವಮಂ ನೀಡಿ ಮೇಗ
ಣ್ದಿರೊಳ್ ಸೂರ್ಯಂಗೆ ನಿಂದುಚ್ಚರಿಸುತೆ ಭವಸನ್ಮಂತ್ರಮಂ ಜಾನಿಸುತ್ತು
ಗ್ಗದ ಭಾಸ್ವದ್ಭರ್ಗಪಾದಾಂಬುಜಮನಚಲಯೋಗಾನ್ವಿತರ್ ಕಣ್ಗೆವಂದರ್ ೮೧

ಮತ್ತೇಭ

ಚಮರೀ¹ರಾಜಿ ರಜಂಗಳಂ ಕಳೆಗುವನುದ್ಯದ್ದಂತಿ ನೀರಿಟ್ಟು ಸಂ
ಭ್ರಮದಿಂ ಸಾರಣೆಗೆಯ್ವುದಲ್ಲಿ ಪವನಂ ಪೂದೂಳಿಯಿಂ ರಂಗಮಂ
ಕ್ರಮದಿಂ ಮಾಳ್ಪುದು ಕೇಕಿ ಬರ್ಹದೆಲರಿಂ ಹೋಮಾಗ್ನಿಯಂ ವರ್ಧಿಕುಂ³
ಸುಮನಃಸ್ತೋಮಮುಸತ್ಫಲಪ್ರಸರಮಂ ಶಾಖಾಚರಂ ಸಾರ್ಚುಗುಂ ೮೨

ಮತ್ತಂ

ಮತ್ತೇಭ

ಪುಲಿ ಕೃಷ್ಣಾಜಿನಮಂ ಸೆಲಂದಿ ಪೊಸನೂಲಿಂ ನೆಯ್ದು⁴ ಪೊಂಬಟ್ಟೆಯಂ
ವಿಲಸದ್ಭೂರುಹರಾಜಿ ವಲ್ಕಲಮನೀಗುಂ ತಾಪಸರ್ಗಲ್ಲಿ ಕಂ
ದಲಸನ್ಮೂಲಮನೊಟ್ಟುಗುಂ ಮೃಗಕುಲಂ ಶೃಂಗಂಗಳಿಂ ಮೀಂಟಿ ತಂ
ದೆಲರ್ಪೊಳ್ಗಂಪನೆಮರ್ಚುಗುಂ ಕರಡಿ ತಾಂ ತರ್ಕುಂ ಸಮಿದ್ವೃಂದಮಂ ೮೩

---

೧ ರಾಗಿ (ಯ) ೨ ಸೊಂಕಿ (ಜ) ೩ ಹೊದ್ದಿಕುಂ (ಚ) ೪ ನೆಯ್ದ (ವ).

ಚಂಪಕ

ಫಣಿಮಣಿದೀಪಮಂ ಬೆಳಗಿ ದೀಪದ ಕಂಬದ ಮಾಟಿಕೆಯಿಂ ಲಸತ್
ಫಣಿತತಿ ಸಾರ್ದು ನಿಲ್ಗು ಮಿರುಳಪ್ಪುದುಮೊಲ್ದು ಟಜಂಗಳಲ್ಲಿ ಮ
ನ್ನಣೆವಡೆದೋದುಗುಂ ಗಿಳಿ ಪುರಾಣಮನಲ್ಲಿಯ ದಿವ್ಯಧೇನುಗಳ್
ಪ್ರಣಯದೆ ತನ್ಮಖಾಹುತಿಗೆ ಬೇಳ್ಪ ಸುಧಾರಸಮೀವುವಾಗಳುಂ ೭೪

ಬಡವಾದೊಡಳತಿವೃದ್ಧರ
ಗಡಣಕೆ ಬೆನ್ನಿತ್ತು ಪೊತ್ತು ಕೇಸರಿಗಳ್ ಸಂ
ಗಡವೆಯ್ದು ಗುವಮಾ ನದಿಯಿ
ರ್ಪೆಡೆಯುತ್ತಲ್ ಕೊಂಡು ಪೋಪುವಂಚೆಗಳವರಂ ೭೫

ಮಹಾಸ್ರಗ್ಧರೆ

ಶುಕ ಮಾರ್ಕಂಡೇಯ ಬೋಧಾಯನ ಕಪಿಲ ಕಣಾದಾಕ್ಷಪಾದಾತ್ರಿ ಮೈತ್ರೇ
ಯಕ ಕಣ್ವಾಗಸ್ತ್ಯ ಪಾರಾಶರ ಭೃಗು ಗವಿಮುದರ್ ಸೂತ ವಾಲ್ಮೀಕಿಗಳ್ ಶೌ
ನಕ ವಿಶ್ವಾಮಿತ್ರ ಧೌಮ್ಯ ಚ್ಯವನ ದಮನ ಶಾತಾತಪರ್ ಪೂರ್ಣಭದ್ರಾ
ದ್ಯಕರ್ದರ್ ತತ್ತಪೋನಂದನದೊಳಘಹರಧ್ಯಾನಸಾಂದ್ರರ್ ಮುನೀಂದ್ರರ್ ೭೬

ಚಂಪಕ

ತ್ರೊಳಪ ಕಿರೀಟಮುಜ್ಜ್ವಳಮೃದುಸ್ಮಿತವಕ್ತ್ರಮನೂನಕಾಂತಿ ಸಂ
ಗಳಿಸಿದ ಕಾಯಮಾಂತ ಶರಚಾಪಮುಡಾಯುಧಮಾಳ್ದ ಬೆನ್ನ ಬ
ತ್ತಳಿಕೆ ನವೀನ[1] ಭೂಷಣಚಯಂ[1] ಮೆಱೆಯುತ್ತಿರೆ ಬಂದನಲ್ಲಿಗೆ
ಚ್ಚಳಿಯದ ಜವ್ವನಂ ಮಿಸುಪ ಸೌಂದರ[2]ನೊರ್ವನಪೂರ್ವವಿಭ್ರಮಂ ೭೭

ವಚನ

ಅಂತೆಲ್ಲಿಂದು ಗಿರಿಕಂದರದ ತತ್ತಪೋವನಮನವಂ ಪೊಕ್ಕು,

ಮಹಾಸ್ರಗ್ಧರೆ

ತತವಿಧ್ಯುಕ್ತಪ್ರಕಾರಂ ಮಿಗೆ ಸದ್ಧಮಳತೀರ್ಥಾಂಬುವಿಂ[4] ಮಿಂದು ಶೈವ
ವ್ರತಮಂ ಕೈಕೊಂಡು ತಾಳ್ವಂ[5] ಸುಸಿತ ಭಸಿತರುದ್ರಾಕ್ಷಮಾಲಾಳಿಯಂ ವಿ
ಶ್ರುತತತ್ತನ್ಮಂತ್ರದಿಂ ಮಂಗಳಮಯತನು ತಾನಾದನತ್ಯಂತಶಾಂತಿ
ಸ್ಥಿತಿಗಿತ್ತಂ[6] ಚಿತ್ತಮಂ ತನ್ಮುನಿ ಶಿವಪದಸದ್ಭಕ್ತಿಸಂಪತ್ಪ್ರಯುಕ್ತಂ ೭೮

ವಚನ

ಅಗಳಂತೆಸೆದಲ್ಲಿ ಪೆಸರ್ವೆತ್ತು[7] ಮಿಸುಪ ಸರಸ[8]ಸರೋವರದ ಪರಿಸರದ ಶುಕನಿಕರ ಮುಖಖಂಡಾರಿತ ಸಾಲಸಹಕಾರ ಖರ್ಜೂರ ಕದಳೀ ಜಂಬೂ ದ್ರಾಕ್ಷಾದಿ ಪರಿಪಕ್ವ

---

೧-೧ ಸನಕಾತ್ರೇಯ (ಯ) ೨-೨ ತಾಪಸಗುಣಂ (ರ) ೩ ಸುಂದರ (ಯ, ರ) ೪ ತೀರ್ಥಾಂಬುವಂ (ಯ) ೫ ತಾಳ್ದಂ (ಕ,ಯ) ೬ ಗಿತ್ತುಂ (ತ,ಗ) ೭ ಪೆರ್ಮೆವೆತ್ತು (ಯ) ೮ ಸರಸ(ಚ)

ಘಳಕುಳಕ್ಷರಿತಮಧುರತರರಸವಿಸರಪ್ರವಾಹದ ಪರಿಕಾಲ್ಗಳಿಂ ಬಳೆಸಿದ ಪರಮ
ಕೈವಲ್ಯಕಲ್ಪತರುವೆಂಬಂತೆಸೆದು ನಳನಳಿಕೆವೆತ್ತ ವಿಮಳಕೋಮಳದಳತ್ರಯವಿಳ
ಸಿತಸರಳಶಾಖಾನಿಕಾಯ[೧]ಕಲಿತಬಿಲ್ವವೃಕ್ಷದ ಕೆಳಗೆ ನಿಲ್ವುದುಂ, ತಪಸ್ಸಮುಚಿತ
ಸ್ಥಳಮಿದಪ್ಪುದಲ್ಲಿಯೇ ನಿಲ್ಲೆಂಬ ಗಗನಗಂಭೀರವಾಣಿಯಂ ಕೇಳ್ದು ಮಹೋತ್ಸ
ವಂದ್ತಾಳ್ದು ತದ್ವೃಕ್ಷಮೂಲಮನಾಶ್ರಯಿಸಿ ನಿಂದು,

ಚಂಪಕ

ಅರೆಮುಗುಳ್ದಕ್ಷಿಗಳ್ ಮಿಡುಕುಗುಂದದ ಚೆಂದುಟಿ ನಿಶ್ಚಳಾಂಗಮು
ರ್ವರೆಯೊಳೆ ತಳ್ತ ಕಾಲ್ದುದಿ [೨]ಸಮುದ್ಧೃತ ಬಾಹುಗೆ ಬದ್ಧ[೨]ಚಾಪಭಾ
ಸುರತರಖಡ್ಗಮುಗ್ಗದ ಕಠಾರಿಯುಡಾಯುಧವಳ್ಳ ಬೆನ್ನವಿ
ಸ್ಫುರಿತನಿಷಂಗಮೊಪ್ಪೆ ಪೊಸವೇಷದ ತಾಪಸನೊಪ್ಪಿ ತೋಱಿದಂ ೭೯

ತುದಿಗೊಳಿಸಿದಂಘ್ರಿಯಿಂದೆ
ತ್ತಿದ ಭುಜದಿಂ ನಿಮಿರ್ದ ದೇಹದಿಂ ನಿಳ್ಕದ[೩] ಚಿತ್
ಪದಮಂ ಮುಟ್ಟುವೆನೆಂದೋ
ವದೆ ನಿಮಿರ್ದೋರಂತೆ ನಿಂತ ಮಾಟ್ಕೆಯೊಳೆಸೆದಂ ೮೦

ವಚನ

ಆಗಳಾ ಪೊಸತಪಸ್ವಿ ತಪಮಂ ಪಡೆಯಱಿದು ಪುರಂದರಂ ಧರಾಮರಾಕಾರಮಂ
ತಾಳ್ದೆಟ್ಟಿಂದು ಕಟ್ಟೆದಿರೊಳ್ ನಿಂದು ನಿರೀಕ್ಷಿಸಿ ಘನಗಂಭೀರಧ್ವನಿಯಿಂದಿಂತೆಂದಂ,

ಮೃಗಮದಕೆ ಕರ್ದಮಕೆ ಸಂ
ಪಗೆಯಲರ್ಗಳ ಸರಕೆ ಸರವಿಗೊಳ್ಮುತ್ತಿನ ಮಾ
ಲೆಗೆ ಗಾಜುದೊಡಿಗೆಗಾವುದು
ಬಗೆವೊಡೆ ಸಂಪರ್ಕಮಾಂಪ ಭೂಷಣವಿಧಿಯೊಳ್ ೮೧

ಚಂಪಕ.

ಕರಜಪಮಾಲೆಯೆತ್ತ ಪೊಸಕೂರಸಿಯೆತ್ತ ವಿಭೂತಿಲಿಪ್ತವಿ
ಸ್ಫುರಿತಶಿವಾಕ್ಷಮಾಲ್ಯವಪುವೆತ್ತ ನಿಬದ್ಧನಿಷಂಗಚಾಪವ
ಲ್ಲರಿ ಮಿಸುಪಂಗವೆತ್ತ ಘನಶಾಂತಿ[೪] ಸಮುನ್ನತಿಯೆತ್ತ ನಿನ್ನ ಭೀ
ಕರತರವೇಷಮೆತ್ತ ಪಿರಿದದ್ಭುತಮದ್ಭುತಮೇನನೆಂದಪೆಂ ೮೨

---

೧ ಕಾಯ (ಚ, ತ)
೨-೨ ಬಾಹುನಿಬದ್ಧ (ಯ)
೩ ನೀಷ್ಕದ (ರ) ೪ ಶಾಂತ (ಚ)

ತಪಮಿರ್ಪ ತಾಪಸರನಾ
ನಪರಿಮಿತರನಱಿವೆನಭವವೇಷಾಂಕಿತರಂ
ವಿಪರೀತವೇಷಧರ ನಿ
ನ್ನುಪಮೆಯ ಕಿತ್ತಡಿಯನೆಲ್ಲಿಯುಂ ಕಂಡಱಿಯೆಂ ೮೩

ವಚನ

ಎಂದು ನುಡಿದಾಖಂಡಲನ ತಪೋವಿಡಂಬನೋಕ್ತಿಯನವನಾಕರ್ಣಿಸಿ, ಕಣ್ದೆಱೆದಭೀಕ್ಷಿಸಿ

ಪೊಱಮೆಯ್ಯ ವೇಷಧರವೇ
ತೆಱನಾದೊಡವೇನೊ ಮಾನಸಾಬ್ಜಾಂತರದೊಳ್
ಕಱೆಗೊರಲನಂಘ್ರಿದಳೆದ
ಬ್ಬುಱಿೞಾಂ[1] ಜಾನಿಸಿ ಮಹೇಶನಂ ಮೆಚ್ಚಿಸುವೆಂ ೮೪

ವಚನ

ಎನೆ ಮತ್ತಮಿಂದ್ರನಿಂತೆಂದಂ,

ಮತ್ತೇಭ

ಬಿಡದತ್ಯುಗ್ರತಪಂಗಳಂ ತಳೆದುಮತ್ಯಾಯಾಸದಿಂ ಯೋಗಿಗಳ್
ಮೃಡಸಂದರ್ಶನಮಂ ವಲಂ ಪಡೆಯರೆಂದುಂ ಕಾಣವಾಮ್ನಾಯವಾ
ವೆಡೆಯೊಳ್ ದುರ್ಲಭನೀಶನಂತವನನೆಂತುಂ ಕಾಣ್ಬೆನೆಂದಿರ್ಪ ನೀಂ
ಗಡ ನಿನ್ನೀ ಪೃಥುಸಾಹಸಂ ಬಡೆ[2]ದುದೆನ್ನೊಳ್ ಪೆರ್ಚಿದಾಶ್ಚರ್ಯಮಂ ೮೫

ಅತಿಸುಖಿ ನೀಂ ಸುಕುಮಾರಂ
ಪ್ರತಿದಿನಮಾಭೀಳತಪಮನೆಂತೆಸಗುವೆ ಪೇೞ್
ಸ್ರಿತಗ[3] ಶಿತಿಕಂಠನಲ್ಪ
ವ್ರತಕ್ಕೆ ತನುತರತಪಕ್ಕಮೇನೊಲ್ದಪನೇ ೮೬

ಪೆಱವಂ ಮರದುದಿಯ ಮಹಾ
ಫಳವಂ ಮಿಗೆ ಬಯಸುವಂತೆ ತನಗಸದಳವಂ
ತಿಳಿಯದೆ ಕಜ್ಜವನೆಸಗುವ
ಬಳರಹಿತಂ ಜಗದ ನಗೆಗೆ ಪಕ್ಕಾಗಿರನೇ ೮೭

---

೧ ಬೞಾಂ (ರ)
೨ ಪಡೆ (ಯ)
೩ ಕೃತಿಯೆ (ರ)

ಮುನ್ನೆಂದುಂ ತಪವಱಿಯದ
ನಿನ್ನಿರವೆತ್ತ ಭವನೆಲ್ಲಿ ತಾನೆತ್ತ ಪೊದ
ಱ್ಱುನ್ನತಿಕೆಗೆಡದೆ ತಳರೆನೆ
ತನ್ನಗಾರಿಪು ನಗುತೆ ಮತ್ತಮಾವನಿಂತೆಂದಂ ೮೮

ಶಾರ್ದೂಲ

ನೀನೆಂಧ್ಯುಕ್ತಿಯೆ ಸತ್ಯವಾಗಮಚಯಕ್ಕಂ ತಾಪಸರ್ಗಂ ಭವಾ
ನೀನಾಥಂ ಸಲೆ ದುರ್ಲಭಂ ಪರಿಕಿಪಂದಿಂತಾದೊಡಂ ಭಕ್ತಿಸಂ
ಧಾನಕ್ಕಾತನಸಾಧ್ಯನಲ್ತು ದಿಟವಪ್ಪುದ್ಯದ್ಭಕ್ತಿಯಿಂ ತತ್ಪದ
ಧ್ಯಾನಂಬೆತ್ತು ದಯಾಬ್ಧಿಯಂ ಘನತಪಂಗೆಯ್ದೊಚ್ಚತಂ ಮೆಚ್ಚಿಪೆಂ ೮೯

ಚಂಪಕ

ಬೆಸನಮನೇೞನೊತ್ತರಿಸಿ ಷಡ್ರಿಪುವರ್ಗಮನೊತ್ತಿ ಮೆಟ್ಟಿಬಾ
ಧಿಸುವ ಹೃಷೀಕಸಂಚಯುಮನ್ನೆಳ್ಕಿಸಿ ದುರ್ಮದಮೆಂಟನಿಕ್ಕಿಬಿಂ
ಧಿಸಿ ಪೊಱಸೂಸದಂತುಸಿರನರ್ದಿಸಿ ಕಾಯಗುಣಂಗಳಂ ಮನಂ
ಮಿಸುಕದ ಮಾೞ್ಕೆಯಿಂ ತಡೆದು ಭಕ್ತಿಯೊಳಾಂ ಪಿಡಿವೆಂ ಮೃಡಾಂಘ್ರಿಯಂ ೯೦

ಸ್ಥಿರಭಕ್ತಿಭಾವದಿಂ ಶಂ
ಕರನಂ ಮೆಚ್ಚಿಸುವೆನೊಚ್ಚತಂ ಮೆಚ್ಚದೊಡೇ
ಹರಣಮನೀವೆಂ ತತ್ಪದ
ಸರಸಿರುಹಕ್ಕಂತುಮೆಡೆಯೊಳಾಂ ಬಿಟ್ಟಪನೇ ೯೧

ವಚನ

ಎಂದು ಪೂಣ್ದವಂ ನುಡಿಯಲೊಡನೆ,

ಬೆರಲೆತ್ತಿ ಪೊಗೞ್ದು ಮುಗುಳ್ದ
ಚ್ಚರಿವಟ್ಟತಿನಿಷ್ಠೆಗವನ ಸದ್ಭಕ್ತಿಗೆ ಜಂ
ಭರಿಪು ನಿಜರೂಪುದೋಱುತೆ
ಪರಸಿ ಮುದಂಬೆತ್ತು ಸಗ್ಗಕೆಯ್ದಿದನಿತ್ತಲ್ ೯೨

ವರಷಟ್ತ್ರಿಂಶತ್ತತ್ತ್ವೋ
ಪರಿಗತನನವಿದ್ಯೆ ಪುಗದ ಶುದ್ಧಾತ್ಮನನ
ಕ್ಷರನನನುಪಮನನಭವನ
ಸ್ಫುರಿತತರಚಿದಖಂಡರೂಪನಂ ಜಾನಿಸಿದಂ ೯೩

---

೮೮-೧ ರಿಪುವಿಂಗೆ ನಗುತ (ಜ) ೨ ನೆಂಬು (ಚ)

Must see ... Read

ನೆಗೆದ ಪುಳಕಾಂಕುರದ|ನೆಱೆ
ಮುಗುಳ್ದಕ್ಷಿಯು|ಮಿಡುಕದಂಗದ್ದೀಟಿದೇಱಿದೆ ನೆ
ಟ್ಟಗೆ [1]ಸಿಂದ ಸುಯ್ಯ[1]|ಸುೞಿಯುದ[2]
ಬಗೆಯು ಪೊಡರ್ಪೆಸೆಯೆ ತಾಪಸಂ ತಪಮಿರ್ದಂ ೯೪

ಪೊಱಗಣ ಮಾಯಾಭ್ರಮೆಯುಂ
ಪಱಿದಿಕ್ಕಿ|ಮನೋಬ್ಜಮಂಡಲತ್ರಯದೆಡೆಯೊಳ್
ಮಿಱುಗುವ ಕರೆಮರೆಯಿಲ್ಲದ
ಕುಱುಪೊಂದದ ಸೂಕ್ಷ್ಮರೂಪನಂ ಜಾನಿಸಿದಂ ೯೫

ಚಂಪಕ

ದಶವಿಧನಾದಮಂ ಪದೆದು[3]| ಕೇಳ್ವ|ಸಮುಜ್ಜ್ವಳಬಿಂದುತೇಜಮಂ
ಸ್ವಶುಭಚಿದಕ್ಷಿಯಿಂ ಬಿಡದೆ ನೋೞ್ಪ|ವಿಕಾಶಿ[4]ಮನೋಬ್ಜಗಂಧಮಂ
ಕುಶಲದೆ ಕೂರ್ತು ವಾಸಿಪ್ಪ|ಮಹಾಸುಖಸಂಶ್ರಯ|ಮಧ್ಯನಾಡಿಕಾ
ವಿಶದಮೃತಪ್ರವಾಹಮನೆ ಪೀರ್ವ ವಿಳಾಸವುಳುಂಬವಪ್ಪಾತನೊಳ್ ೯೬

ಜ್ಞಾತೃಜ್ಞಾನಜ್ಞೇ[5]ಯಾ
ತೀತನನಾ[5]ದ್ಯಂತಶೂನ್ಯನಂ/ನಿರಘ/ಪರಂ
ಜ್ಯೋತಿಃಸ್ವರೂಪನಂ ಪ್ರ
ಖ್ಯಾತಚಿದಾನಂದರೂಪನಂ ಚಿಂತಿಸಿದಂ[6] ೯೭

ಚಂಪಕ

ನೆನೆವನನಂತತತ್ತ್ವಮಯನಂ ಪರಮಾತ್ಮನನಪ್ರಮೇಯನಂ
ಮುನಿಜನಮಾನಸಾಮಳ|ಸರೋವರಹಂಸನನದ್ವಿತೀಯನಂ
ಘನನಿಗಮಾಂತಮೃಗ್ಯನನನಾಮಯನಂ ಚಿದಚಿತ್ಪ್ರಪಂಚರಂ
ಜನನನವಂ ತುರೀಯನನಖಂಡನಿಜೋನ್ನತಚಿತ್ಪ್ರಕಾಶನಂ ೯೮

ಮತ್ತೇಭ

ತ್ರಿದಿನಕ್ಕೊರ್ಮೆ ಫಲಾದನಂ ನೆಗೞ್ದು ಧಾತಂಗೊಂದು ತಿಂಗಳ್//ದ್ವಿಮಾ
ಸದೊಳಾಱುಂ ದಿನಕೊರ್ಮೆ ತತ್ಫಳಚಯಾಹಾರಂ|ತ್ರಿಮಾಸಂ ಬೞಿ
ಕ್ಕೊದವಿರ್ದ ತತ್ತರು/ಕಂದಮೂಲ/ಸುರಸ//ನಾಲ್ದಿಂಗಳೊಳ್ ಜೀರ್ಣಪ
ರ್ಣಗದ ಸಂಸೇವನೆ|ಮಾಸಪಂಚಕದೊಳಾಯ್ತಾತಂಗೆ ವಾತಾಶನಂ ೯೯

---

೧–೧ ಸಿಂದಸೂಯೆ (ರ) ೨ ಸುಯ್ಯದ (ಚ) ೩ ಪಡೆದು (ಚ, ಜ, ತ) ೪ ವಿಕಾಶ (ಜ); ವಿಕಾಸಿ (ಯ, ರ) ೫–೫ ಯು । ಕ್ಕತೀತನಾ (ಜ, ಗ) ೬ ಜಾನಿಸಿದಂ (ಗ, ಚ)

ಚಂಪಕ

ಸ್ಥಿರತರಭಕ್ತಿಯೆಂಬ ಸುಧೆಯಂ ಸವಿದುರ್ಬುತೆ ಕಂದುಕುಂದನಾ
ಳ್ದಿರದೆಸೆವಂಗಮುರ್ವಿದ ಲಸತ್ಪುಳಕಾಂಕುರಪುಜ್ಜ ಲನ್ಮುಖಾಂ
ಬುರುಹಮರಲ್ದು ಸತ್ತ್ವಮಯ[೧]ಮಾನಸವೊಪ್ಪಿರೆ ಚಿತ್ಸುಖಾಬ್ಧಿಯೊಳ್
ಕರಮವಗಾಹಮಿರ್ದನವನೀಶ್ವರಪಾದಸರೋಜಷಟ್ಪದಂ ೧೦೦

ಮತ್ತಂ,

ಮಹಾಸ್ರಗ್ಧರೆ

ತನುವೃತ್ತಂ ನೇತ್ರದೊಳ್ ನೇತ್ರದ ಬಗೆ ಮನದೊಳ್ ತನ್ಮನಂ ಬುದ್ಧಿಯೊಳ್ ಬು
ದ್ಧಿ ನಿತಾಂತಂ ಚಿತ್ತದೊಳ್ ಚಿತ್ತದ ನಿಲವಹಂಕಾರದೊಳ್ ಸಂದಹಂಕಾ
ರನಿಯೋಗಂ ಜೀವನೊಳ್ ಜೀವನೆ ಪರಮನೊಳಾಳ್ದೈಕ್ಯಮಂ ನಿಲ್ವಿನಂ ಬೇ
ಱಿನಿಷ್ಪಂದಂಬೊಂದದಾನಂದದ ನಿಧಿಯೆನಿಸಲ್ ಸಾಲ್ವನಿರ್ದಂ ಮುನೀಂದ್ರಂ ೧೦೧

ಪಳಿಕುಗೊಡದೊಳಹೊಱಗೆ ಪ
ಜ್ಜಳಿಪಂತಜ್ಯೋತಿಯಂತರೊಳಹೊಱಗೆ ಸಮು
ಜ್ಜ್ವಳಿಪಂತಶ್ಚಿಜ್ಜ್ಯೋತಿಯ
ಬೆಳಗಿನೊಳೊಡವೆರೆದು ಬೆರಸಿ ಬೆಚ್ಚವೊಲಿರ್ದಂ ೧೦೨

[೨]ಸ್ವಸ್ಥತುರೀಯಾ[೨]ತೀತಾ
ವಸ್ಥೆಯನೊಳಕೊಂಡು ತೊಳಪ ಶೃಂಗಾಟಕಪು
ದೃಷ್ಟಿ ತನೊಳ್ಪನಘನೊಳ್ ನಿರ
ವಸ್ಥನೊಳೊಡವೆರೆದು ಬಾಹ್ಯಮತಿಯುಱಿತ್ತಿರ್ದಂ* ೧೦೩

ಮಱಿ[೩]ಪೊಂದ[೪]ದೆಚ್ಚಱದ ಕಣ್
ದೆಱಿಯದ ನಿದ್ರಿಸದ ಬೆರೆಯದಗಲದ ಕಣ್ಣಂ[೫]
ಪೊಱಸೂಸದೊಳಗಿರದ ಸಯ್
ವೆಱಗಿನ ಸಮರಸದ ಭಾವಮೇಂ ರಂಜಿಸಿತೋ ೧೦೪

ನೀನಾನೆಂಬೆರಡಳಿದುದು
ಮಾನಸಮಂಭೋಧಿಯಾಲಿಕಲ್ಲಾಯ್ತು ಶಿವಂ
ತಾನಾದನೊ ತಾನೇ ಶಿವ
ನೇನಾದನೊ ಎಂಬ ತೆಱದಿನವನೊಪ್ಪಿರ್ದಂ ೧೦೫

---

೧ ಚಿನ್ಮಯದ (ಚ) ೨–೨ ಸ್ವಸ್ಥಂ ತುರಿಯಾ (ಗ, ವ) ೩ ಮರೆದಿ (ವ) ೪ ವೊಂದ ಯು, (ರ) ೫ ಕರಣಂ (ಯು) *'ಚ' ಪ್ರತಿಯಲ್ಲಿ ಈ ಪದ್ಯವಿಲ್ಲ; ಬಿಟ್ಟು ಹೋದಂತೆ ಕಾಣುತ್ತಿದೆ.

ವಚನ

ಇಂತೆಸೆವ ಸದೃಶಶಿವಧ್ಯಾನಾನುಸಂಧಾನದಿನುತ್ತರೋತ್ತರತಪಃಪ್ರಭಾ೧ವದಿನಾ೧ ತಪಸ್ವಿ ನಿಷ್ಕಂಪನಿರ್ವಿಕಾರತೆಯಿಂ ರಂಜಿಸಿರ್ಪನ್ನೆಗಂ,

ಮಹಾಸ್ರಗ್ಧರೆ

ಕ್ಷಿತಿಯೆಲ್ಲಂ ಕಾಯ್ದುದಾಶಾಧಿಪರ್ಗಗಿದರಮರ್ತ್ಯರ್ಕಳೆಲ್ಲಾಡಿದರ್ ಪ
ರ್ವತವೃಂದಂ ಕಾಯ್ಪುಗೊಂಡತ್ತು ತುಳಜಳಧಿ ಮೆಯ್ಗುಂದಿದತ್ತರ್ಕಚಂದ್ರೋ
ನ್ನತತೇಜಃಸ್ಫೂರ್ತಿಯೆತ್ತಂ ಮಸುಳ್ದುದವನು ತತ್ತಾಪಸಸ್ತೋತ್ರಪ್ರವೃದ್ಧೋ
ಗ್ರತಪೋಗ್ನಿಜ್ವಾಲೆಯಿಂದಂ ನೆಗೆದುದ್ದೊಗೆದ೨ ತದ್ಧೂಮದಿಂ ಮೇಘವೃಂದಂ ೧೦೬

ವಚನ

ಆಗಳಾ ತಪೋವನದ ತಪೋಧನರ್ಗೆ,

ಮತ್ತೇಭ

ಧೃತಿಯುಳ್ಕಾಡಿದುದೇಟಿಗುಂದಿದುದಧೀಶಧ್ಯಾನಮುದ್ಯತ್ತಪಃ
ಸ್ಥಿತಿ ಗೆಂಟಾದುದು ಶಾಂತಿ ಸೋರ್ದುದು ಜಪಾನುಷ್ಠಾನಮಿಲ್ಲಾಯ್ತು ಸದ್
ವ್ರತಮುಂ ಸ್ವೀಕರಿಪೋದುದಟ್ಟಿದುದು ವೇದಾಂತೋದಿತಜ್ಞಾನಮು
ನ್ನತಿಗೆಟ್ಟಿರ್ದುದು ಸದ್ವಿವೇಕಮಳಿದತ್ತಾನಂದದೊಂದೆತ್ತಿರಂ ೧೦೭

ಚಂಪಕ

ಅವನವನೀಶನೋ ಸುಭಟನೋ ಮುನಿಯಲ್ತು ಮುನೀಂದ್ರನಾದೊಡೇ
ಕವನುಡಿಯಲ್ಲಿ ಕಟ್ಟಿದ ಕಠಾರಿಯುಡಾಯುಧಮಾಂತ ಸೀಸಕಂ
ಸವಗಮುಡರ್ಪುವೆತ್ತ ಧನು ಬೆನ್ನ ನಿಷಂಗಮುಮಂತೆ ತಾಳ್ದ ಭೂ
ತಿ ವಿಲಸದಕ್ಷಮಾಲೆ ಕುಶೆಯುಂ ಮಗುಳ್ದೇನಿದು ಯೋಗಿಧರ್ಮಮೋ ೧೦೮

ವಿಪರೀತಮಪ್ಪುವನ ಚರಿತಂ
ತಪಮಧಿಕಂ ತದ್ವಿಚಾರದಿಂದೆಮಗೇಂ೩ ವಂ
ದಪುದವನತ್ತಣಿಂದೊದವಿ
ದುರ್ಪಪಟಳಮಂ ಕಳೆದು ಕಾಯ್ವುದೆಮ್ಮನುಮೇಶಾ ೧೦೯

ಚಂಪಕ

ಮನದೊಳೆ ನಿನ್ನ ಚಿಂತನೆಯುಮಲ್ಲದೆ ಮಾತಿನೊಳೆಯ್ದೆ ದೇವ ನಿ
ಮ್ಮನುಸುಮಪಂಚವರ್ಣಮಯಮಂತ್ರಮುಮಲ್ಲದೆ ಕಾಯದಲ್ಲಿ ನಿ
ನ್ನನಘಪದಾಬ್ಜಸೇವನೆಯುಮಲ್ಲದೆ ಸಚ್ಚಿಗೆವಾಗಳುಂ ಕೃಪಾ
ವನನಿಧಿ ಮಿಕ್ಕ ದುರ್ವಿಷಯಮಂ ತಿಳಿದಿರ್ದಪೆ ನೀಸಿದೆಲ್ಲಮಂ ೧೧೦

---

೧-೧ ವಿದಿತನಾ (ಗ, ತ, ವ)  ೨ ದೊಗೆದು (ರ)  ೩ ದೆಮುಗೇ (ಯು)

ಪತಿಯುಂ ಗತಿಯುಂ ಹಿತನುಂ
ಪಿತನುಂ ದೇವೇಶ ನೀನೆ ಪೆಱತೆ[೧]ಮಗಲ್ಲಿ[೧]
ಲ್ಲತಿಶ[೨]ಯುಕ್ತಿವ[೨]ತಪಸ್ವಿಯು
ಕತದಿಂಧ್ವಾಷ್ಟಲಲನ್ನೊರಸಿ ಪೊರೆ ಕರುಣಾಬ್ಧೀ ೧೧೧

ಆ ಗಿರಿತಟದಿಂ ಧವನಂ
ಪೋಗಿಸಿ ತದ್ವನನಿವಾಸಮಂ ಕರುಣಿಪುದೆಂ
ತಾಗದೊಡೆಮಗೀವುದು ನೀ
ಡಾಗದೆ ಪೆಱತೊಂದನುಚಿತನಗನಂದನಮಂ ೧೧೨

ಪ್ರಣಯಮುಣಮಿಲ್ಲದೊಡಮಾ
ಗುಣಿಯು ಗುಣಂಗಳನೆ ಮಱೆಸದುಸಿರ್ದಂ ಮುನಿಪಾ
ಗ್ರಣಿ ಪಗೆಯೊಳಾದೊಡಂ ಗುಣ
ಗಣಮಿರೆ ತಾಂ ಗ್ರಹಿಸಿ ಪೊಗೞ್ದಿರ್ಪನೆ ಸುಜನಂ ೧೧೩

ವಚನ

ಎಂದಿಂತು ಬಿನ್ನಪಂಗೆಯ್ದ ಮುನಿವರನುಕ್ತಿಯಂ ಕೇಳ್ದು ಪನ್ನಗಧರಂ ಮುಗುಳ್ನಗೆ ನಕ್ಕು,

ತಳತಳನೆ ತೊಳಪ ರದನದ
ಬೆಳಗಂತಃಸ್ಥಿತಕೃಪಾಸುಧಾಂಭೋನಿಧಿಯ
ಗ್ಗಳಿಸಿ ತೆರೆಮಸಗಿದಂತಿರೆ
ಜಳರುಹರಿಪುಮೌಳಿ ತಾಪಸಂಗಿಂ[೩]ತೆಂದಂ ೧೧೪

ಮಲ್ಲಿಕಾಮಾಲೆ

ಆ ತಪೋಧನನಾವನೆಂಬಭಿಶಂಕೆಯೇಕೆ ಜಗತ್ತ್ರಯ
ಖ್ಯಾತನರ್ಜುನನಿಂದ್ರಸೂನು ಮುಕುಂದದೇವರನುಗ್ರಹಾ
ಯರ್ಾತುಳಂ ಭವದೀಯಭಾಗ್ಯಮನೇನು[೪]ಮಂ ವಲಮು[೪]ರ್ಥಿಸಂ
ಭೀತಿ ಬೇಡೆಪೆನತ್ತಣಿಂ ನಿಮಗಂತವಂ ತಪಮಿರ್ದೊಡಂ ೧೧೫

---

೧–೧ ಮಗಿನಿತಿ (ಚ)
೨–೨ ಯುದ ತವ (ವ)
೩ ತಾಪಸಗಿರ್ಂ (ಜ, ಯ)
೪–೪ ಮಂ ನಲವ (ಕ, ಗ, ಚ); ಮಂಡಲೆದ (ರ)

ಮತ್ತೇಭ

ಪಡೆ ನೀಂ ಪಾಶುಪತಾಸ್ತ್ರಮಂ ಗಿರಿಶನಿಂ ಪೋಗಿಂದ್ರಕೀಲಕ್ಕೆ ಪೆಂ
ಪಡರ್ದುರ್ದ್ಯತ್ತಪಮಾಂಪುದೆಂದು ಬೆಸನಿತ್ತಂ ವ್ಯಾಸನೆಯ್ತಂದನೀ[1]
ಯೆಡೆಗಾತಂ ಪಡೆದಿತ್ತ ಮಂತ್ರಮನದಂ ಕೆಯ್ಕೊಂಡು ಮದ್ಭಕ್ತಿ ಸಂ
ಗಡಮಾಗುತ್ತಿರೆ ವೈರಿವರ್ಗವಿಜಯೋಪಾಯಾನ್ವಿತಂ ಫಲ್ಗುನಂ ೧೧೬

ರಿಪುಜಯಕಾರಣಶರಮಂ
ಪ್ರಪತ್ತಿಯಿಂ ಪಡೆವೆನೆಂದು ಬಯಸುತ್ತೆಮ್ಮಿಂ
ತಪಮಿರ್ದಪನಾ ಮುನಿಯಿ—
ತ್ತುಪ[2]ದೇಶಂಬಿಡಿದು[2] ನಿಶ್ಚಿತಾರ್ಥಂ ಪಾರ್ಥಂ ೧೧೭

ಉತ್ಪಲ

ಆತನಭೀಷ್ಟಮಂ ಸಲಿಸಿ ಪಾಶುಪತಾಸ್ತ್ರಮನಿತ್ತು ತತ್ತಪೋ
ಜಾತಮಹೋಷ್ಣಮಂ ತವಿಸಿ ನಿಮ್ಮ ಮನೋರಥಮಿತ್ತು ರಕ್ಷಿಪೆಂ
ಮಾತಿದು ನನ್ನಿಯೆಂದಭಯಮಿತ್ತು ವರಂ ಕಳಿಪುತ್ತೆ ಭಕ್ತಸಂ
ಪ್ರೀತಿಯಿನೆಯ್ದಲುಜ್ಜುಗಿಸಿದಂ ಮೃಗಯಾರತ[3]ನಿಂದುಶೇಖರಂ ೧೧೮

ಗದ್ಯ

ಇದು ನಿಖಿಲ[4]ಭುವನೈಕವಲ್ಲಭಸುರಾಸುರೇಂದ್ರವರದಕರುಣಾವರಣಪರಮಶಿವಲಿಂಗತರುಣಪತಂಗಸಂಗತಮಂಗಳಹೃದಯಾರವಿಂದಬಂಧುರಸರಸಸಜ್ಜನ[5] ಮಾನಿತೋಭಯ ಕವಿತಾವಿಚಕ್ಷಣ[6] ಶ್ರೀ ಷಡಕ್ಷರಿದೇವ ವಿರಚಿತಮಾದ ಕಿರಾತರುದ್ರಲೀಲಾಕಥನ ವಿಪುಳ ಪ್ರಬಂಧದೊಳ್ ದ್ವಿತೀಯಾಶ್ವಾಸಂ ಪರಿಸಮಾಪ್ತಂ.

---

೧ ದನಾ (ರ) ೨–೨ ದೇಶಂ ಪಡೆದು (ರ); ದೇಶಂ ಬಡಿದು (ವ) ೩ ಯಾತ್ರೆಯ (ರ)
೪ ಸಮಸ್ತ (ಚ, ಜ) ೫ ಸರಸಜನ (ಯ) ೬ ವಿಶಾರದ (ಯ)

## ತೃತೀಯಾಶ್ವಾಸಂ

ಶ್ರೀಮದ್ಧಗಪತಿಸುತ್ರಾಮುಖ
ತಾಮರಸಾವೋದ್ಧಭೃಂಗನಮಿತಕೃಪಾಂಗಂ
ಸಾಮಜಹರನಾನತಜನ-
ತಾಮರತರು ಮಾಙ್ಕೆ ಸೌಖ್ಯಮಂ ಶಿವಲಿಂಗಂ ೧

ಉತ್ಪಲ

ದೇವನ ಬೇಂಟೆಯುಜ್ಜುಗದ ಸಬ್ಬವಕಾಜಿರ ಡಿಂಡಿಮಾರವಂ
ಕೀವಿದುದಾ ಮಹಾಕಟಕದೊಳ್ ಸುರದುಂದುಭಿನಿಕ್ವಣಾನ್ವಿತಂ
ಭಾವದೊಳುತ್ಸವಂ ನೆಗಟ್ಟುದ್ದಲ್ಲಿ ಗಣಾಳಿಗೆ ಸಂಭ್ರಮಂ ಪೊದ
ಟ್ಬ್ಬವರಿಸಿರ್ದುದಗ್ಗದಮರರ್ಗದನೂಹಿಸಲಾರ್ಗೆ ಗೋಚರಂ ೨

ಮತ್ತಮಾಗಳ್,

ಚಂಪಕ

ಜಡೆಗಳ ಬಂಬಲೇ ತಲೆದಳಿರ್ ಫಣಿ ಸುತ್ತಿದ ಬಳ್ಳಿ ತಾಳ್ದ ಬಾನ್
ಗಡಲ್ಲದು ಪುಷ್ಪಮಾಲೆ ಗಜಿವೂಗಜ್ಜಿ ತೆಳ್ಳಿಜ್ಜಿ ಬಗ್ಗ ಸಮ್ಮದ್ದೊ
ಳ್ಪುಡೆ ಪೊಸಚಲ್ಲಣಂ ಕರಿಯ ಕುಪ್ಪಸವಾನೆಯ ಕೃತಿಯುಂಗದೊಳ್
ತೊಡೆದ ವಿಭೂತಿಯುದ್ದ ಮಪರಾಗವಿಲೇಪನಮುಗ್ನಿ ಲೋಚನಂ ೩

ಗೈರಿಕಲಲಾಮಮುಹಿಪ
ಸ್ಫಾರಫಣಾರತ್ನರಾಜಿ ಗುಂಜಾಭರಣಂ
ಸಾರಪಿನಾಕಂ ಪದವಿಲ್
ಕೂರಂಬೆಸೆವಾತ್ಮಶಕ್ತಿ ತನಗೊಪ್ಪುವಿನಂ ೪

ಚಂಪಕ

ಅರೆಯೊಡಲಾದ ಕಾಳಿಯುಟಿದಂಗಮನಾವರಿಸಿರ್ದ ಮಾಙ್ಕೆಯಿಂ
ಕರಮೆಸೆದಿಂ[೧]ದ್ರನೀಲರುಚಿಕ್ರಾಂತಕಳೇವರಮೊಪ್ಪೆ ತಾಳ್ದನಾ
ದರದೆ ಕಿರಾತರೂಪಮನುಮಾಧಿಪನಲ್ಲಿ ಘನಸ್ವತಂತ್ರನ
ಚ್ಚರಿವಡೆದಾಗಮಪ್ರತತಿ ಕೀರ್ತಿಸೆ ಬಣ್ಣಿಸೆ ಸರ್ವನಿರ್ಜರರ್ ೫

---

೧ ಮೆಸೆವಿಂ (ಯ)

ಚಂಪಕ

ತಳಿರುಡೆ ಸಂಜೆಗೆಂಪು ಪೊಸಮುತ್ತಿನ ಹಾರಮೆ ತಾರಕಾಳಿ ತ
ಳ್ತಳಿರುಚಿ ಕಾಯಕಾಂತಿ ಕಡುಗತ್ತಲೆ ಮೂಕತಿ೧ಮುತ್ತು ಶುಕ್ರಮಂ
ಡಳಮೆನಮರ್ದೊಪ್ಪೆ ಭಿಲ್ಲಿಯ ವಿಳಾಸಮನಾಳ್ದೆಸೆದಂದು ಸರ್ವಮಂ
ಗಳೆ ನಿಜಕಾಳರಾತ್ರಿವೆಸರಂ ಮಿಗೆ ಸಾರ್ಥಕಮಂ ನೆಗಳ್ಚಿದಳ್ ೬

ಮಹಾಸ್ರಗ್ಧರೆ

ಅರನೇಜಿಲ್ವಣ್ಣ ಬಣ್ಣಂಬಡೆದ ತನು ಪೃಥುಶ್ರೋಣಿ ನೀಲಾಳಕಂ ಪಂ
ಕರುಹಾಸ್ಯಂ ಬಿಣ್ಪನಾಳ್ದೊಪ್ಪುವ ನೆಲೆಮೊಲೆ ಬಿಂಬಾಧರಂ ದೀರ್ಘನೇತ್ರಂ
ತರಳಾಪಾಂಗಂ ಬಟಿಲ್ಬಲ್ಮುಡಿ ಬಡನಡು ರಂಭೋರು ಕೊಂಕಾಂತ ಪುರ್ಬೊಂ
ದಿರೆ ನಾನಾಶಕ್ತಿಯರ್ ಬೇಡಿತಿಯರೆಸಕಮಂ ತಾಳ್ದು ಕಣ್ಗೆಡ್ಡಮಾದರ್ ೭

ಮತ್ತೇಭ

ಹರಿಮಧ್ಯಂ ಮೃಗಶಾಬನೇತ್ರಮಳಿಮಾಲಾವೇಣಿ ಚಂಚದ್ರಥಾಂ
ಗರುಚಿಸ್ಫಾರಪಯೋಧರಂ ದ್ವಿರದಯಾನಂ ಕೋಕಿಳಾಲಾಪಮೊ
ಪ್ಪಿರೆ ಭಿಲ್ಲಾಂಗನೆಯರ್ಕಳಾದಮರಿಯರ್ ನೈಜಾಂಗಮಂ ನೋಡಿ ಭೀ
ತಿರಸಂ ತನ್ಮೃಗವೃಂದಕಾಗದಿರವಂ ತಾಳ್ದಂತೆ ಕಣ್ಗೊಪ್ಪಿದರ್ ೮

ಚಂಪಕ

ತೊಳಗುವ ದಂತದೋಲೆ ಗುರು೨ಗಂಜಿಯ ಬಣ್ಣಸರಂ ತಮಾಲದೊ
ಳ್ದಳಿರುಡೆ ತಳ್ತ ಪೀಲಿಯ ತರಂಗದ ಬಳ್ಳಿಱಿಗಟ್ಟು ಸೂಡಿದುದ
ತ್ಪಳದಳಮಾಲೆ ತಾಳ್ದ ಪುಱುವಚ್ಚೆಯ ಬೊಟ್ಟು ಪಸಿರ್ಪುವೆತ್ತ ಪ
ಟ್ಟಳೆಯ ನಿಚೋಳಮೊ೩ಪ್ಪಿರೆ ಪುಳಿಂದಿಯರಾದರಮರ್ತ್ಯಕಾಂತೆಯರ್ ೯

ಮತ್ತಂ,

ಚಂಪಕ

ತಲೆವೆಳಸುತ್ತೆ ಕಟ್ಟಿದ ತಳಿರ್ ನವಚಂಪಕಕರ್ಣಪೂರಮು
ಜ್ಜ್ವಲಸಿತಕರ್ಣಿಕಾರರಚಿತಕಾಂಚಿ ಮರಂದದ ಬೊಟ್ಟು ಚೆನ್ನ ಮೇ
ಲೊಲೆದೆಸೆವೆಣ್ಣೆಗಂಟು ಪದವಿಲ್ ಮೊನೆಯಂಬು ಲತಾಂತಮಾಲೆ ಮಂ
ಜುಲಗಜದಂತದೋಳ್ಪಳೆ ವಿರಾಜಿಸೆ ಕಣ್ಗೆಸೆದರ್ ಪುಳಿಂದಿಯರ್ ೧೦

ಮೃಗಮದಭಂಗರಾಗಮಸಿತೋತ್ಪಲಮಾಲೆಯ ಜೊಲ್ಲೆಯಂ ಮನಂ
ಬುಗುವ ತಮಾಲಪಲ್ಲವದ ಮೆಲ್ಲುಡೆ ಕಟ್ಟಿದ ಪೀಲಿದಂಡೆ ಚೆ
ಲ್ವಗಲದ ಸಾಂದ್ರಕಜ್ಜಲಲಲಾಮಮೃಗಾಹಿತರತ್ನಭೂಷಣಂ
ಸೊಗಯಿಸೆ೪ ದೇವಿಯರ್ ಬಳಸಿ ನಿಂದೆಸೆದಿರ್ದರಗೇಂದ್ರಪುತ್ರಿಯಾ೫ ೧೧

---

೧ ಮೂಗುತಿ (ಯ) ೨ ಗುಲು (ಚ) ೩ ನಿಚೊಲ್ಲವೊ (ಚ, ಜ); ನಿಚೊಲ್ಲಿಯೊ (ಕ)
೪ ಸೊಗಯಿಪ (ಚ) ೫ ಪುತ್ರಿಯಂ (ಕ, ಯ)

ಚಂಪಕ

ಸಿರಿ ಶಚಿ ವಾಣಿ ರೋಹಿಣಿ ಕರಾಳಿ ಕಳಾವತಿ ಕಾಳರಾತ್ರಿ ಸೌಂ
ದರಿ ವನಲಕ್ಷ್ಮಿ ಶಾಕಿನಿ ಕಪಾಲಿನಿ ಡಾಕಿನಿ ಕಾಳಿ ಮಾರಿ ಶಾ
ರ್ವರಿ ರತಿ ಮುಕ್ತಕೇಶಿ ಶವವಾಹಿನಿ ಮೋಹಿನಿ ಚಂಡಿ ಸಿದ್ಧಿ ಸಂ
ಗರಚರಿ ಚಕ್ರಧಾರಿಣಿ ಮನೋನ್ಮನಿ ಮಾಲಿನಿಯೆಂಬ ಶಕ್ತಿಯರ್ ೧೨

ಮತ್ತೇಭ

ಕ್ಷಿತಿ ಶಾಕಂಬರಿ ವಾರ್ದದೇವತೆಯರಾಶಾದ್ದೇವಿಯರ್ ಯಜ್ಞದೇ
ವತೆ ಮಂತ್ರಾತ್ಮಿಕೆ[1] ಸಪ್ತಮಾತೃಕೆಯರಂಭೋವಾಸಿನೀ ನಿಮ್ನಗಾ
ಸತಿಯರ್ ಜೋಗಿಣಿಯರ್ ಸುಧಾಂಶುವಧುಗಳ್ ಗಾಯತ್ರಿ ಸಾವಿತ್ರಿ ಸ
ನ್ಮತಿ ವಿಖ್ಯಾತಿಯೆನಿಪ್ಪ ದೇವಿಯರಮಂದೋತ್ಸಾಹದಿಂದೆಯ್ದಿದರ್ ೧೩

ಮತ್ತಂ,

ಚಂಪಕ

ಬಡನಡು ಬಳ್ಕೆ ಬಟ್ಟಮೊಲೆ ಮೇಲುದನೆತ್ತೆ ನಿತಂಬಮಂಡಲಂ
ಪೊಡರೆ ಕಟಾಕ್ಷಕಾಂತಿ ಮಿಱುಗುತ್ತಿರೆ ಸೋರ್ಮುಡಿ ಜಾಱೆ ಮೀಱೆ ದಿಂ೧
ಕಿಡೆ ರದನಾಂಶು ಬಿಲ್ಸರಲನಾಂತು ಕರಾಗ್ರದೊಳೊರ್ಪಿನಿಂದದೇಂ
ನಡೆದುದೊ ಕಾರ ಕಾರ್ಮುಗಿಲ ಬಣ್ಣದ ತಿಣ್ಣದ ನಿರ್ಜರೀಜನಂ ೧೪

ಮತ್ತಂ,

ಅಳಿಕುಲನೀಲಕುಂತಳದ ಕಾಂತಿ ವಪುರ್ಲತೆಯಂ ಮುಸುಂಕಿದ್ದಂ
ತಳವಡೆ ಕರ್ಪು ಕಾರ್ಮುಗಿಲ ಮಿಂಚೆನೆ ಕಣ್ಗದಿರ್ಗುರ್ವಿ ಮಿಂಚೆ ಸಾ
ರ್ದೆಳಸಿ ಪಗಿಲ್ತ ಕೇಕಿಯೆನೆ ಬಲ್ಮುಡಿ ತೋಱೆ ಕಲಾಪಮಾಲೆ ಸಂ
ಗಳಿಸೆ ನಗೇಂದ್ರಜಾತೆಯೊಡನೆಯ್ತರುತಿರ್ದರಮರ್ತ್ಯನಾರಿಯರ್ ೧೫

ತಳಿರ್ಗಳಮರ್ಕೆವೆತ್ತ ತಲೆಕಟ್ಟು ಲತಾಂತದ ಮಾಲೆ ಬೆನ್ನ ಬ
ತ್ತಳಿಕೆ ಮರಂದದಣ್ಪು ಪೆಸುರಂಗಿಗೆ ಪೀಲಿಯ ಪಕ್ಕಜಲ್ಲಿ ಗೇ
ಣಳವಡೆ ತೊಟ್ಟ ಪೊಂಬುಲಿಯ ಸಮ್ಮದ ಚಲ್ಲಣವೊಪ್ಪೆ ಬಲ್ಸರಲ್
ದಳೆದು ಗಣಾಳಿ ರುದ್ರತತಿ ತಾಳ್ದುದನೂನಪುಳಿಂದವೇಷಮಂ ೧೬

ಮಹಾಸ್ರಗ್ಧರೆ

ನೆರೆದೆತ್ತಂದಿರ್ದುದಾ ವೇಳೆಯೊಳೆ ವನಚರಾಕಾರಮಂ ತಾಳ್ದು ನಂದೀ
ಶ್ವರನುಂ ಭೃಂಗೀಶವೀರೇಶ್ವರಗುಹಗಣಪರ್ ದ್ದಾರುಕಂ ರೇಣುಕಂ ದು
ರ್ಧರನುಂ ಧೂಮ್ರಾಕ್ಷನುಂ ಧೂರ್ಜಟಿಯುಸಿತಗಳಂ ಬಭ್ರು ಶುಭ್ರಾಂಗನಂಭೋ
ಧರನಾದಂ ತಾಳಜಂಘಂ ಮೊದಲೆನಿಸ ಮಹಾಸತ್ತ್ವಸಾಂದ್ರರ್ ಗಣೇಂದ್ರರ್ ೧೭

---

೧ ಧೀಂ (ಯ) ೨ ಕರ್ಮು (ಯ)

ಮಹಾಸ್ರಗ್ಧರೆ

ಭುವನೇಶಂ ಭೂತಿಯುಕ್ತಂ ಭುಜಗಧರನಜೇಯಂ ಮಹಾಕಾಯನುಗ್ರಂ
ಶಿವರುದ್ರಂ ಪೂರ್ಣಭದ್ರಂ ಬಲವಿಕರಣನೆಭ್ರಾಂಗನಾದಿತ್ಯವರ್ಣಂ
ಭವನಾಶಂ ಶಂಭುರುದ್ರಂ ಕಲವಿಕರಣನೋಂಕಾರನೀಶಾನರುದ್ರಂ
ಧವಳಾಂಗಂ ಧರ್ಮರೂಪಂ ದಮನನವಿಮದರುದ್ರರ್ಕಳೆಯ್ತಂದರ್ಗಾಗಳ್ ೧೮

ಮತ್ತೇಭ

ಸಿಡಿಲಂ ನುರ್ಗುವ ಶೇಷನಂ ತುಡುವ ಕಲ್ಪಾಂತಾಗ್ನಿಯಂ ತೀಡಿ ಬೊ
ಟ್ಟಿಡುವಾಕಾಶಧರಾತಳಂಗಳನೆ ಕೆಯ್ದಾಳಂಗಳಂ ಮಾಟ್ಪ ಪೆರ್
ಗಡಲಂ ಪೀರ್ವ ಕುಲಾಚಲಂದ್ಗೆಳೆದು ಪೊಯ್ಸೆಂಡಾಡುವಾದಿತ್ಯನಂ
ಮಿಡಿವಾರ್ಪುಳ್ಳ ಗಣಾಧಿನಾಥರೊಡನೆಟ್ಟಿಂದರ್ ಮಹೋತ್ಸಾಹದಿಂ ೧೯

ವಚನ

ಅಂತೆಟ್ಟಿಂದ ಗಣೇಂದ್ರಸಂದೋಹಮಲ್ಲದೆಯುಂ, ಬೇಱೆವೇಱೆ ನಿಜರಮಣಿಯರೊಡನೆ ಕಿರಾತನೂತ್ನವೇಶಾಲಂಕೃತರಾಗಿ,

ಚಂಪಕ

ಕುಲಿಶಧರಂ ಧನಂಜಯನಿನಾತ್ಮಭವಂ ದನುಜಂ ಜಲಾಧಿಪಂ
ಜ್ವಲನಸಖಂ ಕುಬೇರನನಲಾಕ್ಷಮಹರ್ಪತಿ ಪದ್ಮವೈರಿ ಮಂ
ಗಲನುಶನಂ ಬೃಹಸ್ಪತಿಮುಖರ್ ವಸುಗಳ್ ಸುರಸಿದ್ಧಸಾಧ್ಯರು
ಜ್ಜ್ವಲತರಯಕ್ಷಚಾರಣಪಿಶಾಚಗಣಂ ನಡೆತಂದುದೞ್ಕ್ಷಿಯಿಂ ೨೦
ಮುನಿಕೋಟಿ ಮುಗಿದ ಕೆಯ್ಗಳಿ
ನ್ನೆನುನಯದಿಂ ಪೊಗೞೆ ಜಯಜಯಧ್ವನಿಯಿಂ ಪಾ
ವನಪದದಿಂ ಮೆಟ್ಟಿದನೊ
ಯ್ಯನೆ ಗಿರಿಶಂ ವಿಧಿನಿಷೇಧಮುಂ ಪಾದುಕೆಯಂ ೨೧

ಚಂಪಕ

ಮೊಱಗಿದುದಭ್ರದೊಳ್ ದಿವಿಜಭೇರಿಯ ಭೂರಿಗಭೀರರಾವಮು
ಜ್ಜ್ವಳಸಿತಶಂಖನಾದದೊಡನಾನಕಘೋಷಣಮುಣ್ಮಿದತ್ತು ಮಂ
ಗಳರವದಿಂದೆ ಪೊಂಬರಿಯಣಂಗಳೊಳಾರತಿಯೆತ್ತಿ ಪಾಡಿದರ್
ವಿಳಸಿತಭಾರ್ಗವೀ ವಿಧಿವಧೂ ರತಿಮುಖ್ಯನಿಳಿಂಪಕಾಂತೆಯರ್ ೨೨

೧ ಲೆಟ್ಟಂದ (ಕ, ಯ)

ಮತ್ತೇಭ

ಮಿಡಿವಿಲ್ ಮಿಂಟಿ ತುಪಾಕಮಿಟ್ಟ ಪದವಿಲ್ ಕೂರಂಬು ಬೆನ್ಗಲ್ಲಿ ಕೆಯ್
ಪೊಡೆ ಗಾಳಂ ಕಿಱುಗೂಳಿ ಬೀಸುವಲೆ ಬೆಳ್ವಾರಂ ಸೊಡರ್ಮಡ್ಡಿ ಕ
ರ್ಪಡಗ[೧]ಮುಂಟೆ[೧]ಡ್ಡಣಮುಲ್ಬಣಂ ಕವಣೆ ನಾರಾಚಂ ಕವಲ್ಕಣ್ಣಿ ಪೇ
ರಡಿ ಖಡ್ಗಂ ಬಡಿಕೋಲ್ಗಳೊಪ್ಪೆ ಜವದಿಂದೆಟ್ತಂದರಾ ಧೀವರರ್ ೨೩
ಇಡುವಲೆ ಸಿಡಿವಲೆ ಕಿಱುವಲೆ
ನಡೆವಲೆ ಪೆರ್ವಲೆ[೨] ತೊಡಂಕುವಲೆ ಕೊಲ್ವಲೆ ಕ
ಕ್ಕಡವಲೆ ನಿಡುವಲೆ ಸಾಲ್ವಲೆ
ಬಿಡುವಲೆಗಳೆನಿಪ್ಪುವೆಸೆದುವಾ ಬೇಂಟೆಗರೊಳ್ ೨೪

ಮತ್ತ[೩]ಮದಲ್ಲದೆಯುಂ,

ಮತ್ತೇಭ

ಪ್ರಣವಂ ಶೃಂಖಲೆ ಸಾರಮೇಯಮುಮುದಗ್ರಾಮ್ನಾಯಂ ಪುರಾಣವ್ರಜಂ
ಶಣಲ[೪]ಸೂತ್ರಂ ಸ್ಮೃತಿ ಜ್ಯಂತ್ರವಾಗಮಮೆ ಬೆಳ್ವಾರಂ ಮಹಾದೀಕ್ಷೆ ಕೂ
ರ್ಗಣೆ ತರ್ಕಂ ಬಡಿಕೋಲ್ ಸಮಾಧಿ ಸಬಳಂ ಕೂರಿಟ್ಟಿ[೫] ಯೋಗಂ ಸಲ
ಕ್ಷಣಮಂತ್ರಂ ಧನು ಜ್ಞಾನಮೇ ಕವಣೆ ನಾರಾಚಂ ತಪೋವಿಸ್ತರಂ ೨೫

ಚಂಪಕ

ಸುರಿಗೆ[೬] ವಿರಕ್ತಿ ಸುವ್ರತಮುಡಾಯುಧಮುಡ್ಡಣಮಾತ್ಮವಿದ್ಯೆ ಸ
ಚ್ಚರಿತಮೆ ಬ್ಲೋಟಿ[೪]ಯೆಂಬು ಕಿಱುಗೇಣ್ ಶ್ರವಣಂ ಮನನಂ ಕರಾಸಿ ಶಾಂ
ಕರನವಭಕ್ತಿ[೭]ದೀಹದ ವ್ಯಗಾರಿಗಳಾಗೆ[೭] ಗಣಾಳಿ ತಾಳ್ದು ವಿ
ಸ್ಫುರಿತವಿಲಾಸ[೮]ದಿಂ ನಡೆದರ್[೯]ಲ್ದೊಡಗೂಡಿ ಕಿರಾತರುದ್ರನಂ[೧೦] ೨೬

ಗಱಿಗಣೆ ಬೆನ್ನ ಬತ್ತಳಿಕೆ ಮೆಟ್ಟಿದ ಕೆರ್ಪು ತಮಾಲಪಲ್ಲವಂ [ಯೊಳ್
ತುಱುಗಿದ ಗೊಂಡೆಯಂ[೧೧]ಮಿಸುಪ ಬಿಲ್ ಗುರುಗುಂಜಿಯ ದಂಡೆ ಮುಂಡೆ
ಮಿಱುಗುವ ಪೀಲಿಗಟ್ಟು ಪೊಸನಿಗ್ಗವದೊಳ್ಪ ಪಚ್ಚೆಗುಪ್ಪಸಂ
ಕಿಱುದಳಿರಾಂತ ಚಲ್ಲಣಮದೇಂ ಬಗೆಗೊಂಡುದೊ ತತ್ಕಿರಾತರಾ ೨೭

ಕರಿರಿಪು ಮತ್ಸರಂ ಮದಮೆ ದಂತಿ ವಿಮೋಹಮೆ ಖಡ್ಗಿ ಕಾಮಮೇ
ಹರಿಣಮಸೂಯೆ ಸೂಕರಮನಲ್ಪತರಕ್ಷುವೆ ರೋಷಮಾಸೆ ಕಾಟ್
ಮರೆ ಘನದಂಭಮೇ ಕರಡಿ ಲೋಭಮೆ ಸೈರಿಭಮನ್ಯಪಾತಕೋ
ತ್ಕರಮೆ ವಿಹಂಗಸಂಘಮೆನಿಸಿರ್ದುದು ತದ್ವನದೊಳ್ ಮೃಡಾಜ್ಞೆಯಿಂ ೨೮

---

೧-೧ ಪೆರ್ವ (ಚ) ೨ ಪೆರ್ಬಲೆ (ಕ) ೩ ಅಂತು (ಗ, ತ) ೪ ಚಟು (ಕ, ಗ, ಜ) ೫ ಕೂರ್ಟಿ (ಚ, ಜ) ೬ ಸುರಗಿ (ಯ) ೭-೭ ದೀಹದ ವ್ಯಗಾದಿಗಳಾಗೆ (ಚ, ಜ); ದೀಪಕಮೃಗಾವಳಿಯಾಗೆ (ಯ) ೮ ವಿಶಾಲ (ಕ) ೯ ನಡೆದುದೊ (ಯ) ೧೦ ರುದ್ರನಾ (ಯ) ೧೧ ಯಿಂ (ವ).

ವಚನ

ಆಗಳ್ ವಿಪುಳಪುಳಿಂದವೇಷದಗಣಿತಗಣಪ್ರತಾನಮುಮಪರಿಮಿತನಿರ್ಜರವಿತಾನಮುಂ ಬೆನ್ನನೆಟ್ಟಿರೆ ಬಿಂಕದ ಬೆಡಂಗಿನ ಬಿಯದವೆಣ್ಣಳೊಡನೆ ಸಂಭ್ರಮಷಾಡಂಬರಂ ಮಿಗೆ ಬಂದ ಗಿರಿತನೂಜೆವೆರಸು ಕಿರಾತಮಹೇಶ್ವರಂ ವಿಪುಳತರೋತ್ಸಾಹದಿನಡಿದಾವರೆಯ ಸೋಂಕಿನಿಂ ಪೊಡವಿವೆಣ್ಣೊಡಲ್ಗೆ ಪುಳಕಾಂಕುರಮನೊಡರ್ಚುತುಂ ನಡೆತಂದಿಂದ್ರಕೀಲಕುತ್ಕೀಲಕಟಕದ ಪೇರಡವಿಯಂ ಪೊಕ್ಕು ನಿಂದು ನಿರೀಕ್ಷಿಪಾಗಳ್,

ಮಹಾಸ್ರಗ್ಧರೆ

ಶುಕಭಾರದ್ವಾಜಶಾಂಡಿಲ್ಯರುರ್ಷ್ಯಕಪಿಲಸತ್ಕೌಶಿಕಾಗಸ್ತ್ಯಯುಕ್ತಂ
ಪ್ರಕಟೋದ್ಯತ್ತಾಪಸಾವಾಸಮನದು ನಭಮಂ ಋಕ್ಷರಾಜಾನ್ವಿತಂ ನಾ
ಗಕದಂಬಾನಂತವಿಭ್ರಾಜಿತಮಹಿಪುರಮಂ ಕರ್ಣಭೀಷ್ಮಾದ್ಯುಭ ತಥಾ
ನಕಠೋರಂ ಪಿಂಗಚಕ್ಷುರ್ಬಲಮನಮಮ ಪೋಲ್ತೊಪ್ಪುತಿರ್ದತ್ತರಣ್ಯಂ ೨೯

ಮಱುಜವಣಿ[೨] ಮಾಣಿಕದ ಪಾ
ಸಜಿ[೩] ಪರಿಸದ ಮೊರಡಿ ಪರಿವ ಸಿದ್ಧರಸದ ಜಲ್ಲಿ
ದೊಱೆ[೪] ಬಜ್ಜರಗವಿ ಪಸಿರ್ಗ
ಲ್ಲಱೆ[೫] ಸಸಿಗಲ್ಗೋಡು ಮೆಱೆಗುಮಾ ಗಿರಿತಟದೊಳ್ ೩೦

ಇದು ದವಶಿಖಿಯಿದು ಕಿಂಶುಕ
ಮಿದು ಕಾಮುರ್ಗಿಲಿದು ತಮಾಲಮಿದು ಮದಗಜಮಿಂ
ತಿದು ಗಂಡಶೈಲಮೆಂದೆಂ
ಬುದು[೬] ತಿಳಿವೊಡಶಕ್ಯಮೆನಿಪುದಾ ಪೆರ್ಗಾಡೊಳ್ ೩೧

ಮಹಾಸ್ರಗ್ಧರೆ

ಬೆಟಲಾಲಂ ಮತ್ತಿ ಬೇಲಂ ಪುಣಿಸೆಯಣಿಲೆ ದಿಂಡಾಲಮಂಕೋಲೆ ಬೇವಿಂ
ಗಳಮೆಕ್ಕಂ ಕಕ್ಕೆ ಮಾಮಂಬಟಿ ಬಿದಿರರಿಟಾಳಂ ಬಕಂ ಚಂದನಂ ಗು
ಗ್ಗುಳಮೀಚಲ್ ಬನ್ನಿಗೇರ್ ಮುತ್ತುಗಮರಳಿ ಪತಂಗಂ ಪುಲಿಂಗಿಲ್[೭] ತಮಾಲಂ
ಮೊಳಗಾಚಂ ನೆಲ್ಲಿ ನೇರಿಲ್ ತದುಕು ಪನೆಗಳೊಪ್ಪಿರ್ಕುಮಾ ಕಾಡೊಳೆತ್ತಂ ೩೨

ಗರುಡಂ ಕರ್ಬಕ್ಕಿ ಕಂಕಂ ಗೊರವಮೊರಲೆ ಪೆರ್ಬಕ್ಕಿ ಪಾರಾವತಂ ಹೆಂ
ಗುರು ಟೀವಂ ಟಿಟ್ಟಭಂ ತೊಂಡಿಗನುರುಳಿಗನೆಬರ್ಬಯುಮಂ ಚಾತಕಂ ತಿ
ತ್ತಿರಿ ಚೆಂಬೋತಂ ಪಿಕಂ ಮೀಂಗುಲಿಲ್[೮] ಮರಕುಟಿಗಂ ಗೀಜಗಂ ಗುಬ್ಬಿ ಘೂಕಂ
ಸರಟಂ ಸಾಳ್ವಂ ಪಸುಂಬಂ ಪರಡೆ[೯] ಶಿಖಿ ಶುಕಂ ತದ್ವನಾಂತಸ್ಥಮಿರ್ಕುಂ ೩೩

೧ ಮಾ (ಗ, ಜ, ತ) ೨ ವಣೆ (ಯ) ೩ ಬಾನ್ (ವ) ೪ ಬುದ (ಗ, ತ) ೫ ಗೆಲ್ (ಗ,ತ) ೬ ಪರಿ (ಚ) ೭ ಲಾವಂ (ಯ) ೮ ಮೀಂಗಿಲಿ (ಜ) ೯ ಪರಡಿ (ಜ)

ಚಂಪಕ

ಶರಭನಿಭಾರಿ ಸೈರಿಭನಿಭಂ ಬನವಂದಿ ತರಕ್ಷು ಖಡ್ಗಿ ಶಂ
ಬರ ಮೃಗ ಮೇಷ ಮೈಣ ಮೃಜಭೇದನ ಮೃಕ್ಷ ಮೃಗೌಕಸಂ ಮೊಲಂ
ಮರೆ ನರಿ ಪೂತಿನೈಕ್ಕು ನಕುಲಂ ಮರವಾವುಗಳೆಂಬಿವಾಗಳುಂ
ಕರಮೆಸೆದಿರ್ಪಿನಂ ಮೆಱೆದುದಾ ವಿಪಿನಂ ವಿಪಿನದ್ಧ ಕಂದರಂ ೩೪

ಜ್ಯೋತಿರ್ಲತೆಗಳ ರುಚಿಸಂ
ಜಾತಂ ಫಣಿಗಣಫಣಾಮಣಿಪ್ರಭೆ ಬಿಡದುದ್ಯ
ದ್ಯೋತಿಪ್ರುಥದಲ್ಲದಾ ಖ
ದ್ಯೋತಪಶಾಂಕಾಂಶು ಪುಗದು ತತ್ಕಾನನದೊಳ್ ೩೫

ವಚನ

ಮತ್ತಮಲ್ಲಿ ಬಿತ್ತರವಾದ ಸಿಂಗರಂಬೆತ್ತು ಬಿನದದಿಂ ಮನದನ್ನನಂ ಸಮ್ಮದಂ[೨] ಮಿಗೆ ನೆರ್ಮೆ ಕುಳ್ಳಿರ್ದ[೩] ಶಶಿಕಾಂತದೊಡ್ಡುಂಗಲ್ಲೊಳ್ ತನ್ನ ಪಡಿನೆೞಲಂ ಕಂಡು ಮೆಯ್ಯಾರ್ದು ನಿಂದು ಸಪತ್ನಿಯೆಂದು ಬಗೆದು ಮುಳಿದು ಮುಗಿಲ್ವಟ್ಟೆಗೆ ಮೀಱಿ ಪಾಱುವ ಬಿಜ್ಜೋದರಿ ಬಿಗಿದುಟ್ಟ ಸುವರ್ಣಾಂಬರದ ಸೆಱಂಗು ನಿಶಿತಮೆನೆ ಕೊಂಕಿದ ನಿಜಕಂಟಕದೊಳ್ ತೊಡರ್ದು ಸರ್ರನೆ ಪೆಱ್ಱದು[೧] ಸಿಲ್ಕಿ ಪಸರಿಸಿ ಪವನ ನೆಲೆಪದಿನೊಲೆದು ಗಿರಿವರನ ನೆಗೞ್ತೆಗೆ ನೇಮಿಸಿದ ಕೇತುಪಟದಂತೆಸೆಯೆ ತದ್ಧ್ವಜ ದಿರ್ಘದಂಡಾಕಾರಮಂ ತಳೆದು ಬಾಂದಳಮಂ ಮುಟ್ಟೆ ನಿಮಿರ್ದು ನಿಂದ ವೇಣು ಕಾಂಡದಿಂ ಕರಿ ಮುಱಿದ ಪೆರ್ಗೊಂಬಿನೆಱಂಬಿನೊಳೊಱೆತ್ತುಗುವ ಸಾಲ ಪಗಿನ ದೊಳ್ ಮಿಗೆ ನೆಗೆವ ಗಗನಚರಿಯು ನಿಡುಜಡೆ ತೊಡಂಕಿ ಜಿಗಿಲು ತೆಗೆಯಲ್ ಬಾರ ದಿರೆ ಪಾಱುಗೆಟ್ಟು ಬಿಡಿಸಲೊಡರ್ಚುವ ತನ್ನಿತಂಬಿನಿಗೆ ಕುಳ್ಳಿರಲ್ ಕೊಂಬನಿಂಬು ಗೊಟ್ಟು ಸೆಳೆಮಿಂಚಂ ತಳೆದ ಕಾರ್ಮುಗಿಲ ಪಿರಿಯು ಸಿರಿಯುನೊಳಕೊಂಡು ಕೆಲ ದೊಳ್ ಕಣ್ಗೊಳಿಪ ತರುಣತಮಾಲದಿಂ; ಪರಿಸರದೊಳ್ ಸಂಚುವೆತ್ತಿಂಚರದಿಂ ತನ್ನ ಚೆನ್ನಕಿನ್ನರಿಯೊಳ್ ಶ್ರುತಿಗೂಡಿ ಪಾಡುವ ಕಿನ್ನರಿಯ ಸರಸಸಂಗೀತಮಂ ಕೇಳ್ದು ಗಡಣಂಗೊಂಡು ಪೆಡೆಯೆತ್ತಿ ನಲಿವ ನಾಗಂಗಳಂ ಕೊನೆಗೊಂಬುಗಳೊಳ್ ತಾಳ್ದು ಮಿನುಗು[೪]ವಡೆದ ಪೆಡೆವಣಿದ್ಯುಱುಗಲಿಂ ತಳ್ತು ಮಾಣಿಕ್ಯದ ಮರಂಗಳಂತಿ ರ್ದಂದಂಬೆತ್ತ ಚಂದನಧರಾರುಹಂಗಳಿಂ; ಶಶಿಶಿಲಾಸದನದೋವರಿಯ ಪೂವಸೆ[೫] ಯೊಳ್ ಸವಿಸುಸಿಲೆಸಗುವ ಖಚರದಂಪತಿಗಳ ಗಳರವದ ಕಳಕಳಮಂ ಕೇಳ್ದು ಗಳಿಲನೆ ತಲೆಯೆತ್ತಿ ನಲಿದುಲಿದಳ್ಳವಿಗೞಿದೆಳಸುವ ಪರಿವಿಡಿಯ ಪಾರಿವಂಗಳಂ ತಳೆದು[೬] ಮದನಾಗಮದ ಮಂತಣಸಾಲೆಯಂತೆ ಮನೋಜ್ಞವಾದ ಕುರುವಕಾನೋ

೧ ಬಿಡಿಪು (ಜ) ೨ ಸಂದು (ಚ, ತ) ೩ ಕುಳ್ಳಿರ್ದು (ತ) ೪ ಮಿರುಗು (ಚ) ೫ ಪೊಸವಸೆ (ಯ) ೬ ತಳೆದ (ಚ)

ಕಹದಿಂ; ಮನಃಪ್ರಿಯನೊಡನೆ ಮನಬಂದ ಬಂಧದಿಂ ತನು ಕರಗಿ ತನಿಸುಸಿಲ ಸೊಗದ ಸೊಗಸನನುಭವಿಸಿ ಶಶಿಕರಂ ಸೊಂಕಿದ ಸಸಿಗಲ್ಲ ಪುತ್ತಳಿಯಂತೆ ಬೆಮರ್ತರ್ ಸುರಸುದತಿಯೊರಸಿದ ಬೆಮರ ಪರಿಮಳಮಂ ತಳೆದು ಪರಿಸರದ ಸುರಯಿಯ್ಯಲರ್ಗಳ ನಱಿದು ಪರಿಮೞ[1]ಗೊಂಡೆರಗಿದ ಪಱಮೆವೆಱಿದುೞುಗಲಿಂ ತಳ್ತ[2]ನಿಱಿ[3]ದ್ದಳಿರ ನಾಳ್ದ ಕೊಂಬುಗಳಿಂ ಪಣ್ತ ಜಂಬೂಕುಜದಂತೆ ಕಮನೀಯಮಾದಶೋಕದ್ರುಮದಿಂ; ರತಿಮದನರನೋಜೆಯಿಂ ಪೂಜಿಸಲ್ಕೆ ಪೂದಿಱಿಯಲ್ಕೆಱಿದೇೞುಂಜವ್ವನದ ಸೊಂಪೆಸೆವ ಕಿಂಪುರುಷನಿತಂಬಿನಿಯ ಸಡಿಲ್ದಟಿಲ್ವ ಕಡುನಿಡಿದಾದ ಕೇಶಪಾಶದಿಂ ತೊಡರ್ದು ತಳಿರ್ತ ತಮಾಲಲತೆ ತಳ್ತಂತೆ ಪೆಂಪನಾಳ್ದ ಚಂಪಕಕುಜಂಗಳಿಂ; ಕಾದಲನಗಲ್ದಗಲ್ಕೆಯುರಿಪಂ ಸೈರಿಸಲಾಱದೆ ಹರಣಂಗಳೆಯಲುಜ್ಜುಗಿಸಿ ತುಱುಗಿ ತೀವಿದ ಕೆಂಬೊಗರನಾಳ್ದ ಪೂದೊಡಂಬೆಯ ನೊಗ್ಗರಮುಂ ಕಂಡು ದವಶಿಖಿಯ ಕೆಂಡದೊಟ್ಟಿಲ್ಗೆತ್ತು ಪೊಕ್ಕಸಿದ್ಧ ಸೀಮಂತಿನಿಯನೊಳಕೊಂಡು ಮದನಪ್ರತಾಪ ಲಕ್ಷ್ಮಿಯಂ ಪೊತ್ತಂತೆ ಚಿತ್ತಂಗೊಳ್ವ ಕಿಂಶುಕನಿಕುಂಜದಿಂ; ಕಣ್ಬೊಲಂದಪ್ಪಿ ಕಡೆಸರಿದು ತನ್ನನಱಸಿ ತೊಳಲ್ವ ಕಾದಲನಂ ಕಾದಲ್ಮೆಯಿಂ ಕಾಡಲೆಳಸಿ ಘಱಿಲನೆ ಬೀೞ್ಲ್ವಿಡಿದ್ದಡರ್ದು ನಿಡುಗೊಂಬಿನೆಲೆದುೞುಗಲ ಪೊದಱ ಪೊರೆಯೊಳ್ ಮೆಯ್ಗರೆದಿರ್ದ ಗಂಧರ್ವಸೌಂದರಿ ನೆಲೆವಡೆದಕ್ಷೀಣರೂಪಯಕ್ಷಿಣಿಯಂತೆಸೆಯೆ ಮಿಸುಪ ವಟವಿಟಪಿಯಿಂ; ಬಾನ್ಬಟ್ಟೆಯೊಳ್ ಬಿಱುವಿಸಿಲ್ ಬೆನ್ನಂ ಸುಡೆ ಬಿಂಕಂಗುಂದಿ ಬೞಲ್ದು ಬರ್ಪ ಗರುಡದಂಪತಿಗೆ ತಂಪಂ ಪರೆಪಲೆಂದು ವಿಪಿನಲಕ್ಷ್ಮಿ ವಿಲಾಸದಿಂ ಬೀಸಲ್ ನಿಡುದೋಳ್ಗಳಿಂ ನೆಗೆಪಿ ಪಿಡಿದ ವ್ಯಜನಮೆನಿಸಿ ರಂಜಿಪ ಪರ್ಣಪಾಳಿಯಿನೇೞ್ವೆತ್ತ ತಾಳ ಭೂರುಹದಿಂ; ಪೆಂಪುವೆತ್ತ ಪರಿಮಿತ ಫಲಪರ್ಣಪುಷ್ಪಗುಚ್ಛಂಗಳಿನತಿನಿಬಿಡತೆಯನಪ್ಪುಕೆಯ್ದು ರವಿಶಶಿಕರಂಗಳೆಡೆಯಾಟಕ್ಕೆ ತೆಱಪುಗುಡದೆ ತಮದ ತವರ್ಮನೆಯೆನಿಸಿ ವಿಚಿತ್ರತರಖಗಮೃಗಂಗಳ್ಗೆ ವಿಹರಣಸ್ಥ[5]ಳಮಾಗಿ ಮಹಾಗಹನಮೊಪ್ಪಿರ್ದುದಲ್ಲಿ.

ಮತ್ತೇಭ

ಮೊಱಗಂ ಬೃಂಹಿತಮೆಂದು ತಳ್ತ ಕುಡಿಮಿಂಚಂ ಕೋಡಿದೆಂದಣ್ಮಿ ಪೆರ್
ಮೞೆಯಂ ಸೋರ್ವ ಮದಾಂಬುವೆಂದು ಬಗೆದಂದಂಭೋದಮಂ ದಂತಿಯೆಂ
ದಳಿಪಿಂ ಪಾಯ್ದು ವಿಲಂಘಿಸುತ್ತುಗುರ್ಗಳಿಂ ಪೊಯ್ದತ್ತದಂ ಮೌಕ್ತಿಕಾ
ವಳಿ ಝಲ್ಲೆಂದುಗೆ ಭೀಮಗರ್ಜನನುಳತ್ಕಂಠೋಗ್ರಕಂಠೀರವಂ ೩೬

೧ ಪರಿಮಳಂ (ಚ) ೨ ತಳೆದು (ಚ)
೩ ನಿಡು (ಯ) ೪ ಬಿಜ್ಜಣ (ಯ)
೫ ಸ್ಥಾನ (ಕ)

ನಿಡುಗಲೞಲೆಯ ಮೊನೆಯುರ್ಚಿದ
ಜಡಧರಮೆಸೆದುದು ನಗಾಹಿತಪ್ರಣಿಧಿಯುದೆಂ
ದೃಢದರ್ಶಿರೋಷದಿನಾ ಗಿರಿ
ತೊಡರ್ಚಿ ಪಿಡಿದುಗ್ರಶೂಲದೊಳ್ ತೋಱುವವೋಲ್ ೩೭

ಒರಸೆ ಕರಿ ಕಟದ ಮದದಿಂ
ಪೊರೆದುರುಚಂದನದೊಳೞಿಗಿ-ನಿಂದಳಿಕುಳಮಂ
ಹರಿನೀಲಮೆಂದು ಕಿಱಿಯುಲ್
ಸುರತರುಣಿ ತುಡುಂಕಿ ಸಖಿಯನೇಂ ನಗಿಸಿದಳೋ ೩೮

ಜರದ್ಗಜಗರಮಂ ಕರದಿಂ
ಕರಿ ಪಿಡಿದೊಡೆ ನಭದೊಳದು ವಿಧುಂತುದನೆಂತಂ
ತಿರೆ ಪಾಯ್ದುದು ಮುನ್ನಂಗಿದ
ಮರೆಯುಡಗುಚ್ಚಳಿಸೆ ಮುಖದಿನೞಱಿ ದಿನೇಶಂ ೩೯

ಹರಿ ಬೆಸಸಿದೊಡಾರ್ದೆಱಗಿ
ದರಿಜಳಧರಭಟನ ಮಿಂಚೆನಿಪ್ಪಸಿಲತೆಯಂ
ಗಿರಿ ಸೆಳೆದೊಳಗಿಟ್ಟಂತಿರೆ
ಕರಮೋಷಧಿಲತೆಯುದೇಂ ಮನಂಗೊಳಿಸಿದುದೋ ೪೦

ಚಂಪಕ

ಪದಗೊಳಿಸುತ್ತೆ ದಾನರಸದಿಂ ರಸೆಯಂ ಮದಭೃಂಗಮಾಲೆಯಂ
ಕೆದಱುತೆ ಕರ್ಣವಾಳ[3]ದೆಲರಿಂ ಬಿಸಕಾಂಡಮಿದೆಂದು ಚಂದ್ರಕಾಂ
ತದೊಳದಿರಲ್ಲಿ ಮಾರ್ಪೊಳೆವ ತನ್ನಯ ಕೊಂಬನೊಱಲ್ದು ನೋಡುತುಂ
ಮೃದುಗತಿಯೊಪ್ಪೆ ತೂಗಿ ತೊನೆದಾಡುತೆ ಬಂದುದದೊಂದು ಸಿಂಧುರಂ ೪೧

ಕೊಳದೊಳೆ ಕಿೞ್ತು ಪಂಕರುಹಮಂ ಪ್ರತಿಮಾನದೊಳೊಟ್ಟಿಕೊಂಡು ಪಾ
ಯ್ವಳಿಗಳನಗ್ರಪಲ್ಲವದೆ ಸೋವುತೆ ಪಂಕಜರೇಣು ತಳ್ತ ಮಂ
ಜುಳರದನಂ ಕೆಱಂಬೊಳೆಯೆ ಶೈವಲವಲ್ಲರಿ ಪತ್ತಿ ವಕ್ಷದೊಳ್
ಮಿಳಿರೆ ಕರೇಣುವಿರ್ದೆಡೆಗದೇಂ ತಳರ್ದತ್ತೊ ಮದಾಂಧಸಿಂಧುರಂ ೪೨

೧ ನೆಂಬಂ (ಯ) ೨ ಕರಮೆಸೆದೀ (ಚ) ೩ ಕರ್ಣತಾಳ (ಯ)

ಮತ್ತಮಲ್ಲಿ,

ಪಿಡಿಯ ಮೊಲೆಯುಂಡು ತಣಿಯುತೆ
ಕಡೆವಾಯೊಳ್ ಪಾಲ ಧಾರೆ ಮೊಳೆವಲ್ಗಳವೋಲ್
ಬಿಡದೆಸೆಯೆ ಮುದ್ದುವೀಱು
ತ್ತಡಿಯಿಡುವುವು ಪಲ್ಲಮಱಿಯ ಮಱಿಗಳ್ ವನದೊಳ್ ೪೩

ಎರಡುಂ ಕಡೆವಾಯೊಳ್ ತ
ಳ್ತಿರೆ ಬಿಸಕಾಂಡಂಗಳೆರಡುರದನದ ಬಟಿ ಸಂ
ಧುರುಜಳಫೇನವಳಕ್ಷಂ
ಕರಮೆಸೆದುದ್ಧದೊಂದು ದಂತಿ ಚೌದಂತನವೋಲ್ ೪೪

ವಚನ

ಇಂತು ಸಂತತವೊಪ್ಪುವ ಕಾಂತಾರದಂತರಾಳದೊಳ್ ಬಿಯದರ್ ಬೇಂಟೆಯಾಡಲೆಂದು ಸಂಭ್ರಮಂ ಮಿಗೆ ಸರುವಿಡಿದು ಪಣೆಯಿರ್ಪೆಡೆಗೆಯ್ತಂದು ನಿಂದು ನೆರೆದು ಪರೆದು,

ನೊರೆ ತುಪ್ಪುಳ್ ಕೊಳಗು ಕೆಸಱ್
ನೊರಜುಗಳುಗುರಡರ್ದ ಸೊವಡು ಪಜ್ಜೆಗಳಂ ಪಾ
ಯ್ದಿರದಱಿಸಿ ನೋಟ್ಪ ಬಿಯದರ್
ತ್ವರಿತದಿನಲ್ಲಲ್ಲಿ ಪರಿದರಾ ಪೆರ್ಗಾಡೊಳ್ ೪೫

ಚಂಪಕ

ಮದರಸವೊಕ್ಕುದಿಲ್ಲಿ ಕರಿ ಪೋದುದು ಸಿಂಗದ ಬಟ್ಟೆ ನೋಟಿಪ್ಪೊಡಿಂ
ತಿದು ಗಜಮೌಕ್ತಿಕಂ ಸಿಡಿದುದಿಲ್ಲಿ ಲುಲಾಯದ ಮಾರ್ಗಮಪ್ಪುದಾ
ಸ್ಯದ ನೊರೆ ಬೆಟ್ಟುದಿಲ್ಲಿ ಕೆಸಱರ್ದಪುದಿಲ್ಲಿ ವರಾಹನೆಯ್ದಿದ
ತ್ತಿದಿರೊಳೆ ಪುಲ್ಲೆ ಪಾಯ್ದೆಡೆಯದಪ್ಪುದು ಸೂಸಿದುಷ್ಮಾಸ್ಯದೊರ್ವಿಗಳ್ ೪೬

ವಚನ

ಎಂದು ಪಲವಜ್ಜೆಯುಂ ಪರೀಕ್ಷಿಸಿ,

ಚಂಪಕ

ಕರಿಗೆ ಕರಾಗ್ರಮಂ ನೆಗೆಪಿ ಕೋಟ್ಮಗಕೆರ್ವರರಿಭತ್ತಿ ಸಿಂಹಕೊ
ಪ್ಪಿರೆ ರಸನಾಗ್ರಮಂ ತೆಱಿದು ಕೆಯ್ಯರಡಂ ನಿಮಿರ್ದೆತ್ತಿ ಬಗ್ಗಕೆ
ತ್ತರದ ಕುರುಳ್ಗಳಂ ಪರೆಪಿ ಜಲ್ಲಿಮಿಗಕ್ಕೆ ವರಾಹಯೂಥಮೊ
ತ್ತರಿಮಣಿಕಾಲ್ಗಳಂ ಮಡಿದು ತೋಱಿದರೊಯ್ಯನೆ ಸನ್ನೆ ವೇಂಟೆಯೊಳ್ ೪೭

---

೧ ಸೂಸಿದುದಾ (ಕ, ತ) ೨ ಕಿರ್ಬಿರ (ಕ) ೩ ಮಣಿದು (ಯ)

ಚಂಪಕ

ಸರಳಿಸುವೇಣನೋಡುವ ಮೊಲಂ ಬಗೆಗುಂದುವ ಖಡ್ಗಿ ನಿಲ್ವ ಸೂ
ಕರನಡಿಗೊಳ್ವ ಪೆರ್ಮರೆಯುಡಂಗುವ ಪೆರ್ಬುಲಿ ಕಣ್ದೊಬಲ್ವ ಬಲ್
ಗರಡಿ ಕಡಂಗಿ ಮೆಯ್ಮುರಿವ ಕೇಸರಿಯಾಲಿಪ ದಂತಿ ಪಾಱೆ ಸುಯ್
ವರಿವ ಖಗಾಳಿಯೊಪ್ಪೆ ಪಿರಿದಾದುದು ಬೇಂಟೆಯ ವಾದ್ಯದಬ್ಬರಂ ೪೮

ಮತ್ತಮಾಗಳ್,

ಮಹಾಸ್ರಗ್ಧರೆ

ನಡೆ ಸಾರ್ ಮುಂದೆಯ್ದು ಬೆಳ್ವಾರಮನೆ ಬಿಗಿ ನಿಕುಂಜಂಗಳಂ ಸೋದಿಸಂಬಂ
ಬಿಡು ನೀದಾರ್ಣಂಗಳೊಳ್ ನಿಲ್ ಪಸರಿಸು ಬಲೆಯಂ ಪಜ್ಜೆಯಂ ನೋಡು ನೀಂ ಪೇ
ರಡಿಯಂ ಕೆಯ್ಸನ್ನೆಗೆಯ್ ನಿಂದೆಱಗದಿಳುಲಿಪಂ ಮೆಲ್ಲನಾಕರ್ಣಿಸೊಳ್ಪಿಂ
ದಡರುದ್ಯದ್ಭೂಜಮಂ ಮಾರ್ಗಮನೆ ತಡೆವುದೆಂಬಬ್ಬರಂ ಪರ್ಬಿತೆತ್ತಂ ೪೯

ಮತ್ತಂ,

ಚಂಪಕ

ಬಡಿಯುಡುವಂ ತೊಡಂಕಧಿಡು[1] ಪೆರ್ಮೊಲನಂ ಬಲೆವೀಸಿ ಪುಲ್ಲೆಯಂ
ಕೆಡೆಪು ಲುಲಾಯಮಂ ತಱೆ ಪೊದಱೆಸು ದಂತಿಯನಾರ್ದು ಖಡ್ಗದಿಂ
ಕಡಿ ಪುಲಿಯಂ ಕರುತ್ತಱೆ ವರಾಹನನಟ್ಟೆಯೊಳುಗ್ರಸಿಂಹಮಂ
ಪೊಡೆಬಿಡದಣ್ಮಿ ಕೂರಸಿಯಿನೆಂಬ ರವಂ ಪಿರಿದಾಯ್ತರಣ್ಯದೊಳ್ ೫೦

ನಡುಗುವ ಕಾಲ್ಗಳುಬ್ಬರಿಪ ಕಿಬ್ಬರಿ[2]ಗಳ್ ಪೊಡೆವಳ್ಳಿ ಬಾಯ್ಗಳಿಂ
ಕಡೆಗುಗುತಿರ್ಪ ದೂರ್ವೆ ಬೆದರ್ದೀಕ್ಷಿಪ ನೀಳ್ದಲರ್ಗಣ್ ಪೊದಱ್ ಸುಯ್
ಬಿಡದಿರೆ ನೀಳ್ದು ಕೋಡುಲುಗೆ ಬತ್ತಿದ ಬಾಯ್ವೆರಸಲ್ಲಿ ಭೀತಿ ಕೆಯ್
ಗುಡೆ ಕಡುವೇಗದಿಂದೆ ಕೊಣಕಿಟ್ಟುದು ವನ್ಯಮೃಗೀಕದಂಬಕಂ ೫೧

ಉತ್ಪಲ

ನೀಡಡಿಗೊಂಡು ನಿಂದು ಮೊಣೆಯಿಂ ಕಣೆಯುಂ ತೆಗೆದಾರ್ದು ಬಿಲ್ಗದಂ
ಪೂಡಿ ಪೊಡರ್ಪುವೆತ್ತು ಕಟಕಾಮುಖ[3]ದಿಂ ಸೆಳೆದುರ್ವಿ ಲಕ್ಷ್ಯಮಂ
ನೋಡಿ ಕಟಾಕ್ಷವಂಬುದ್ಧಿಯೊಂದಿರೆ ತೆಳ್ಪಡು ಬಳ್ಕಿ ಗಾಡಿ ಕೆಯ್
ಗೂಡಿರೆ ತೊಟ್ಟನೆಚ್ಚು ಮೃಗವೃಂದಮನಿಕ್ಕಿದರಲ್ಲಿ ಭಿಲ್ಲಿಯರ್ ೫೨

---

೧ ತೊಡಂಕುತಿಡು (ಕ)
೨ ಕಿಬ್ಬಿರಿ (ಯು)
೩ ಕಾರ್ಮುಕ (ಕ)

ಚಂಪಕ

ಪಸರಿಸಿ ಪತ್ತಿ ಧಾತ್ರಿಗೆ ಕುನುಂಗಿ ವಿಲಂಘಿಪ್ಪ ಮಾನವಂ ಪರೀ
ಕ್ಷಿಸಿ ತೆಱೆದಿರ್ದ ಬಾಯ್ ನಿಮಿರ್ದ ಗೋಣ್ಮೆಯಿಕ್ಕದ ಪಿಂಗಳಾಕ್ಷಿ ಮುಯ್
ನ್ನಿಮಿಕದ ಮೂಗು ಸುರ್ಕುಗಿವಿ ಭೂಮಿಯೊಳ್ಪಾಡಿಪ ಬಾಲವೊಪ್ಪೆ ಗ
ರ್ಜಿಸಿ ಮಿಗೆ ಪಾಱೆ ಮೇಲ್ವರಿವ ಬಗ್ಗ ಮನೆಕ್ಕಿದನುಗ್ರಲುಬ್ಧಕಂ ೫೩

ಒದೆಧೆಳೆಯಂ ಪುಟಂ ನೆಗೆದು ಗರ್ಜಿಸಿ ಮುಂದಣ ಕಾಲ್ಗಳಿಂದೆ ಕಾ
ಲ್ಪೊಪ್ಪದವೆ ಭುಜಾಗ್ರದೊಳ್ ನಡೆ ನಖಂ ಪೊಡೆದುಗ್ರತೆಯಿಂ ಸಿರಕ್ಕೆ ಪಲ್
ದುದಿಯನವುರ್ಚುತೆವ್ವಳಿಪ ಬಗ್ಗದ ಗಂಡಿಕೆಗಂಡು ನೆತ್ತಿಯು
ಗ್ರದೆ ಮೊನೆಯುರ್ಚೆ ಕೆಯ್ಸುರಿಗೆಯಿಂ ಧರದಿಕ್ಕಿದನಾ ವನೇಚರಂ ೫೪

ಮತ್ತೇಭ

ನೆಲನಂ ಪೊಯ್ಯುತ್ತು ಬೆರಂಟುತುಗ್ರಸದದಿಂ ಕೆಂಗಣ್ಗಳಿಂ ನೋಡುತುಂ
ಮಲೆಯುತ್ತುಂ ಮದವೇಱೆ ಮಾಮುಸಕ್ಕದಿಂದಂ [೧]ಮೋಱೆಯಿಂ ಬಾಗಿ[೧] ಮೂ
ಡಲದುತ್ತುಂ ಸುಱುಕಿಟ್ಟು ಸೂಸೆ ನೊರೆ ಬಾಯಿಂ ಬಾಲಮೆತ್ತುತ್ತೆ ಕೋ
ಡಲುಗುತ್ತುಂ ಪುಟವೆಟ್ಟು ಪಾಯ್ದುದಿದಿರೊಳ್ ಶೈಲಪ್ರಭಂ ಸೈರಿಭಂ ೫೫

ಅದಿರದ್ದಿದಿರ್ಗಾಂತು ರೊಂಕಿ
ಟ್ಟೊದಱುತ್ತುಂ ಬರ್ಪ ಕಾಡ ಕೋಣನ ಗೋಣಂ
ಮುದಯುತನೊರ್ವಂ ತಱಿದಿ
ಕ್ಕಿದನಾರ್ಪಿಂ ನಿಶಿತಖಡ್ಗದಿಂದೆ ಪುಳಿಂದಂ ೫೬

ಮತ್ತಮೊರ್ವಂ,

ಮತ್ತೇಭ

ಮರಗೊಂಬಂ ಮುಱಿದಾಂತು ನೀಳ್ದ ಕರದಿಂ ಕಾಯ್ಪೇಱುತುಂ ಸೋರ್ವ ದಾ
ನರಸಾಸಾರದೆ ಸೀಯ್ವ ಮಾರ್ಗದ ತೃಣಂ ಕೆಂಗಣ್ಗಳಿಂ ನೋಡಿ ನಿ
ರ್ಭರದಿಂ ಗರ್ಜಿಸಿ ಕೋಡೊಳೀಡಿಱಿಯಲಾರ್ಪಿಂ ಬರ್ಪ ಸಂದೃಪ್ತಸಿಂ
ಧುರಮಂ ಪಾಯ್ದು ಪಳಂಚಿ ಪೊಯ್ದನಸಿಯಿಂ ಧೀರೋತ್ತಮಂ ಧೀವರಂ ೫೭

ನೀಡಿದ ಭರಿಕೆಯ್ಯುಲದೊಳ್
ಕಾಡೊಡೆಯಂ ಪೊಡೆದ ಬಾಣಮಿಭಮಸ್ತಕದೊಳ್
ಮೂಡಿದುದು ನೆತ್ತಿ ಮುತ್ತೊಡ
ಗೂಡಿರೆ ಸುಗಿದಗಿದು ಬಿಟ್ಟುದಾ ಗಜಮುಳಿಯೊಳ್ ೫೮

೧-೧ ಮೋರೆಯಿಂಬಾಗಿ (ಗ, ತ)

ವಚನ

ಪೆಱತೊಂದು ತಾಣದೊಳ್,

ವನಚರನೆಚ್ಚಂ ಕರಮಂ¹
ವಿನುತರದದ್ವಯಮನೊಡನೆ ಪಡಲಿಡೆ ಕರಿ ತಾ
ನೆನೆಸುಂ ಪೋಲ್ತುದು ಸುರಿವರೆ²
ಘನರುಧಿರಂ ರುಧಿರವೃಷ್ಟಿಗಱೆವೆಂಬುದಮಂ ೫೯

ಕರಿಯು ಗುರುಕುಂಭಮಂ ತ
ನ್ನರಸಿಯ ಕುಚಕುಂಭಮೆಂದು ಪರಿಕಿಪ ಶಬರಂ
ಶರದಿಂದೆಚ್ಚಂ ಹರಿಯ್ವುದ
ಕರದೆಱಗೆ ತದೀಯಮಸ್ತಕಂ ಪಱಿವಿನೆಗಂ ೬೦

ಮತ್ತೇಭ

ನಡೆಗಲ್ಲಂಜನಶೈಲದಂತೆ ಪಡೆದೇಟ್ಟಿರ್ಪಾನೆಯಂ ಕಂಡು ಬಲ್
ಸಿಡಿಲೆಂತೆಂತಿರೆ ಗರ್ಜಿಸುತ್ತ ದರ್ಪದಿಂ ತತ್ಕುಂಭಮಂ ಸೀಳ್ದು ಕಾ
ಯ್ಪಡಿಸುದ್ಯದ್ವಪ್ರವೈರಿಯರ್ಗಳ ಸಿರಂ ಬೀೞ್ವಂತಿರೆಚ್ಚಂ ಜವಂ
ಗೆಡದರ್ಧೇಂದುಮುಖಾಸ್ತ್ರದಿಂ ರುಧಿರಮೊತ್ತಂ ಪಾಯ್ವಿನಂ ಧೀವರಂ ೬೧

ಮಲ್ಲಿಕಾಮಾಲೆ

ಕುಡಿವಾಲಂ ನೆತ್ತಿಯೊಳ್ ಮಿಳ್ಳಿಱಿಯೆ ಪೊಳೆಯ್ವ ಕ್ರೂರ್ದಾಡೆ ಕೆಂಗಣ್ಗಳಿಂ ಕೆಂ
ಗಿಡಿ ಸುತ್ತಂ ಸೂಸೆ ಪೆರ್ಮೂಗಲರೆ ತೆಱೆದ ಬಾಯ್ ಭೀತಿಯಂ ಬೀಱೆ ಕಾಯ್ಪಂ
ಪಡೆದಾರ್ಪಿಂ ಗರ್ಜಿಸುತ್ತುಂ ಕೆಳರ್ದು ಕೆದಱುತುಂ ಕೇಸರವ್ರಾತಮಂ ಮುಂ
ಗಡೆಯೊಳ್ ಪಾಯ್ದುಂದುದ್ಯತ್ಕ್ಷುದನಖವಿದಳತ್ಕುಂಜರೇಂದ್ರಂ ಮೃಗೇಂದ್ರಂ
ಅತಿರೌದ್ರಾಕಾರದಿಂ ಘುತ್ತಟಿಸಿ ಮುಳಿದು ತಿಂಭಂದದಿಂ ನೋಡಿ ಶೌರ್ಯೋ
ನ್ನತಿಯಿಂ ಮುಂಗಾಲ್ಗಳಿಂ ಮುನ್ನೆಗೆದು ಪುತ್ತುಗುರ್ಗಳಿಂ ಪೊಯ್ದು ಮೇಲ್ವಾಯ್ದು ಗರ್ವೋ
ದ್ಧತಗರ್ಜತ್ಸಿಂಹಮಂ ಬೀಱೆನುತೊಗೆದ ಧದಟಂ ಖಡ್ಗದಿಂ ಪೊಯ್ದು ನತ್ಯ
ದ್ಭುತಸತ್ತ್ವಂ ಧಾತ್ರಿಯೊಳ್ ತಚ್ಛರಮುರುಳೆ ಕನಲ್ದೋರ್ವನುದ್ಯತ್ಕಿರಾತಂ ೬೨

ವಚನ

ಇಂತು ಕಾಂತಾರಾಂತರಾಳದೊಳ್ ಪುಳಿಂದನಿಳಿಂಪರ್ ಪಲವೇಂಟೆಯಾಡುತ್ತಮಿರೆಯಿರೆ,

---

೧ ಕರಿಯಂ (ಜ); ಶರಮಂ (ಯ) ೨ ತರಿ (ಯ)

ಏಳಸನ್ಮಂದಾರಭೂಜಾತದ ಬೞಿನೆೞಲೊಳ್ ನಿಂದು ಚಂದ್ರಾಶ್ಮಪೀಠ
ಸ್ಥಳದೊಳ್ ಪೂಗೊಂಚಲೊಂದಂ ಪಿಡಿದಡಿಗಡಿಗಾಘ್ರಾಣಿಸುತ್ತೊಲ್ಮೆಯಿಂ ಚೆಂ
ದಳಿರುದ್ಯತ್ತಾಲವೃಂತಂಬಿಡಿದು ಪದೆಪಿಂ ಬೀಸೆ ಕಲ್ಯಾಣಿ ತಾಂ ಕಣ್— [೬೪
ಗೊಳಿಸಿರ್ದಂ ನೋಡುತುಂ ಬೇಂಟೆಯ ಪೊಸಪರಿಯಂ ಲೀಲೆಯಿಂ ಭಾಳನೇತ್ರಂ

ಗದ್ಯ

ಇದು ನಿಖಿಲ[೧]ಭುವನೈಕವಲ್ಲಭಸುರಾಸುರೇಂದ್ರವರದಕರುಣಾವರಣಪರಮಶಿವಲಿಂಗತರುಣಪತಂಗಸಂಗತಮಂಗಳಹೃದಯಾರವಿಂದಬಂಧುರ [೨]ಸರಸಜನಮಾನಿತೋಭಯ ಕವಿತಾವಿಚಕ್ಷಣ[೩] ಶ್ರೀಷಡಕ್ಷರಿದೇವ ವಿರಚಿತವಾದ ಕಿರಾತರುದ್ರಲೀಲಾಕಥನವಿಪುಳ ಪ್ರಬಂಧದೊಳ್ ಅರಣ್ಯಮೃಗಯಾವರ್ಣನಂ ತೃತೀಯಾಶ್ವಾಸಂ ಪರಿಸಮಾಪ್ತಂ.

---

೧ ಸಮಸ್ತ (ಚ, ಜ) ೨ ಸರಸಜನ (ಯ) ೩ ವಿಶಾರದ (ಯ)

# ಚತುರ್ಥಾಶ್ವಾಸಂ

ಶ್ರೀಕಾತ್ಯಾಯನಿಯೆರಸಂ
ಗೋಕರ್ಣಾಧೀಶಕಟಕನನುಪಮನಭವಂ
ಲೋಕೈಕಪ್ರಭು ಪರಮಂಕೃ
ಪಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ ೧

ಮತ್ತಮಾಗಳ್,

ಚಂಪಕ

ಅತಿಬಳನಮೂಕದಾನವನೆನಿಪ್ಪವನೊರ್ವನಖರ್ವಗರ್ವಸಂ
ಯುತನವನೀಧರೇಂದ್ರದ ನಿತಂಬದೊಳುಂಬಿನೊಳಿರ್ದು ನಿರ್ಜರ
ಪ್ರತತಿಯ ಪರ್ಬಿದೊಬ್ಬರಮನಾಲಿಸಿ ತಿಂದಪೆನೀ ಸುಪರ್ವಸಂ
ತತಿಯನೆನುತ್ತೆ ತಾಳ್ದಿ ಪ್ರೊಜಿಮುಟ್ಟನುದಗ್ರವರಾಹರೂಪಮಂ ೨
ಇದು ಸಿರದಲ್ಲಿ ಕೋಡೆಸೆಗೆಯುದ್ಧಂತಕಸೈರಿಭವೋ ಬೞಿಕ್ಕಮಿಂ
ಇದು ಭರಿಕೆಯ್ಯನಾನದ ಮಹಾಗಜದಾನವನೋ ವಿಚಾರಿಪಂ
ಇದು[1] ನಡೆಗಲ್ತು ಸಂಚರಿಪ ಮೇಚಕಶೈಲವೊ ಸಾರ್ದು ನೋೞ್ಪೊಡಂ
ಇದು ಪೃಥುಕಾಯಸೂಕರನೊ ಪೇೞನೆ ತೋರಿದುದಾ ವರಾಹಕಂ ೩

ಮತ್ತೇಭ

ಬಡಬಜ್ವಾಲೆಯ ವಿಸ್ಫುಲಿಂಗತತಿಯೆಂಬಂತಿರ್ಪ ಕಣ್ ಚಕ್ರದಿ
ರ್ಕಡೆಯಂ ಬಾಯೊಳ್ ಜುಂಕಿದಂತೆ ಪೊಳೆಸಿಂ ಕೊಂಕಿರ್ದ ಕೂರ್ದಾಡೆ[2]ಯಲ್
ಸಿಡಿಲುದ್ಯದ್ರವಮೊಳ್ ಭೀಕರಮುಖಂ ಕಲ್ಪಾಬ್ದಮಂ ಪೋಲ್ವ ಕಾ
ರೊಡಲತ್ಯದ್ಭುತಮಾಗೆ ಬಂದುದು ಮಹಾರೋಷಾಕರಂ ಸೂಕರಂ ೪

ಚಂಪಕ

ಖುರಖುರಘಾತದಿಂದೆ ಪುಡಿಯೇೞ ಶಿಲಾತಳಮೊತ್ತೆ ಮೆಟ್ಟಿ ಮೆ
ಯ್ಯೊರಸೆ ಬೃಹತ್ಕುಜಪ್ರತತಿ ನುರ್ಗೆ ವಿಜೃಂಭಣಮೊಳ್ಪು ಗರ್ಜಿಸು
ತ್ತುರುತರಪರ್ವತಂ ಪ್ರತಿರವಂಗುಡೆ ಬೆರ್ಚಿಸಿ ತನ್ನಗೇಂದ್ರಕಂ
ದರಮೃಗರಾಜಿಯಂ ಜವದಿನೇಟ್ತುರುತಿರ್ದುದು ಸೂರ್ಕಿದೆಕ್ಕಲಂ ೫

ವಚನ

ಆ ಕಟಕದೊಳಿಂತು ಬರ್ಪ ಕಿಟಿಯಂ ಕಬ್ಬಿನೆ ಕಂಡು,

---

೧ ವಿದು (ಯ) ೨ ಕೋದ್ದಾಡೆ (ಚ)

ಚಂಪಕ

ಎಲೆ ಎಲೆ ಪಂದಿ ಪಂದಿ ಮಿಗೆ ಬಂದುದು ಬಂದುದು ಭಿಲ್ಲರೆಲ್ಲರಂ
ಬಲಿಗೊಳಲೆಂದು ಮೃತ್ಯು ಕಿಟಿರೂಪಮನಾಳ್ದವೊಲೊತ್ತು ಪತ್ತು ಸಿಲ್
ಕೊಲಗದಿರಟ್ಟು ಕುಟ್ಟು ತಿವಿ ಕೋಲ್ ತಱಿ ಗೋಣ್ಮುಱಿ ಕುತ್ತು ೧ಸೀಳ್ ಪೞಂ
ಚಲಸದೆ ಪೊಯ್ ಕರುತ್ತೞಿಯೆನಿಪ್ಪ ರವಂ ಪಿರಿದಾಯ್ತು ಬೇಡರೊಳ್ ೬

ವಚನ

ಎಂದು ಸಂರಂಭದಿಂ ಮುಟ್ಟೆ ಮೂದಲಿಸುತ್ತೊಟ್ಟಜೆಯಿಂ ತೊಟ್ಟನೆಟ್ಟಗಳಂ ತಾಳ್ದು ಕಟ್ಟುಬ್ಬಟೆಯಿಂ ಕವಿದ ದಿಟ್ಟಬಿಯದರ ಪರ್ಬಿದಬ್ಬರಮನಾಲಿಸಿ ಕನಲೆ ಮಿಗೆ ದಾಡೆಯಂ ಮಸೆದಂಡುಗೊಂಡು ತೃಣವಂ ತುಂಡಿಸಿ ಬಾಲಂ ನಿಮಿರೆ ಕಾಲಂ ತೂಗಿ ಪಟುತರಶೌರ್ಯದಿಂ ಪುಳಿಂದನಿಳಿಂಪರ್ಗಭಿಮುಖವಾಗಿ ನಿಂದು,

ಚಂಪಕ

ನಡುಗೆ ಧರಿತ್ರಿ ದಿಕ್ಕರಿಗಳಳ್ಕೆ ಭಯಂಗೊಳೆ ಸತ್ತ್ವಸಂಕುಳಂ
ಪಡಲಿಡೆ ಶೈಲಶೃಂಗತತಿ ತುಳ್ಕೆ ಮಹಾಬ್ಧಿ ಕರಾಳಘೋಷದಿಂ
ಘುಡುಘುಡುಸುತ್ತೆ ದಾಡೆಗಡಿದುರ್ಬಿ ಕಡಂಗುತೆ ಕಾಯ್ಪುವೆತ್ತು ಕಣ್
ಗಡೆ ಕಿಡಿಸೂಸೆ ನೋಡಿದುದು ನಿಂದು ಪುಳಿಂದರನುಗ್ರಸೂಕರಂ ೭

ಪೊಗೆ ಪೊಱಸೂಸೆ ಘೂರ್ಮಿಸುವ ಮೂಗಿನೊಳೀಕ್ಷಿಪ ಲೋಹಿತಾಕ್ಷಿಯಿಂ
ಭುಗಿಲೆನೆ ಪೊಣ್ಮೆ ದಳ್ಳುರಿ ಕರಂ ಮಸೆದಗ್ಗದ ದಾಡೆಯುಗ್ರದಿಂ
ದ್ಧುಗುತಿರೆ ತೋರಕೆಂಗಿಡಿಗಳುಗ್ರತೆಯಂ ತಳೆದುರ್ಕಿ ಸೊರ್ಕಿನಿಂ
ದಗಲದೆ ನುಂಗಲವ್ವಳಿಸಿದತ್ತು ವರಾಹಕನಾ ಕಿರಾತರಂ ೮

ಕುಸಿದ ಸಿರಂ ಕೆಲಕ್ಕೊಲೆದ ಬಲ್ಮುಸುಡುರ್ಬಿದ ಮೆಯ್ಯ ರೋಮಮಾ
ರ್ಪೆಸೆವ ಮನಂ ಮರಲ್ದ ಕಿವಿ ಮಿಳ್ಳಿಱಿದಾಡುವ ಬಾಲಮುರ್ವಿ ಪಾಳ
ಯ್ದುಸಿರೊಡನೆಟ್ಟಿ ಬೆನ್ ಬಲಿದ ಗೋಣ್ ಕಿಡಿಪಾಱುವ ದಾಡೆ ೫ತಳ್ತು ಗು
ರ್ಮಿಸೆ ೫ ಮಲೆದುರ್ಕಿ ಗರ್ಜಿಸಿ ಕರಂ ಪರಿತಂದುದು ಪಂದಿ ಕಾಯ್ಪಿನಿಂ ೯

ಬೊಣೆದೈವರೆಚ್ಚ ಕೂರ್ಗಣೆಗಳಂ ಮಿಗೆ ಮುತ್ತಿದ ಜಾಯಿಲಂಗಳಂ
ಕ್ಷಣದೊಳೆದಿರ್ಚಿ ತುಂಡಿಸಿ ಕುರುತ್ತಱಿ ೬ದಿಟ್ಟೆಯನಂಡುಗೊಂಡು ಬಿ
ನ್ನಣದೆ ಬಿಬಿರ್ಚಿ ನಿರ್ಭರದೆ ಪೆರ್ಬಲೆಯಂ ಪಱಿದಿಕ್ಕಿ ಕೇಣದಿಂ
ಕೆಣಕಿದ ಧೀವರಾಮರರನೆಕ್ಕಲನುರ್ಬತೆ ಸೀಳ್ದು ದ್ಧಾರ್ಪಿನಿಂ ೧೦

ಮತ್ತಂ,

---

೧ ಕುತ್ತು (ಯ) ೨ ಸಂ (ಯ) ೩ ತರೆ (ಯ) ೪ ಪೂ (ಗ, ಚ, ಜ) ೫-೫ ತಳ್ತು ಗುರ್ಮಿಸೆ (ಕ, ಗ, ಚ) ೬ ದಿಟ್ಟಿಯ (ಕ)

ಚಂಪಕ

ನೆರೆಥದಿರಾದೊಡಟ್ಟುವ ಪೊದಟ್ದರೆಯುಟ್ಟದೊಡಂಡುಗೊಳ್ವ ಪಾ
ಯ್ತುರೆ ಮುಸುಡೆತ್ತಿ ಗರ್ಜಿಪ ಕೆಲಂದೊಲಗುತ್ತಿರೆ ದಾಡೆಗುಟ್ಟ ನಿ
ರ್ಭರದೆ ಪಳಂಚಲೌವಳಿಪ ಬೊಬ್ಬಿಱಿಯುತ್ತಿರೆ ಮೆಯ್ಯ ರೋಮಮಂ
ಬ್ಬರಿಸೆ[೧] ಕಡಂಗಿ ನಿಲ್ವ ಬಗೆ ಮೊಕ್ಕಳಮಾದುದು ಸೂಕರೇಂದ್ರನಾ ೧೧

ಮುಳಿವ ಮುರಲ್ವಱಿಪ್ಪುವ ಮಲಂಗುವ ಪೊಂಗುವ ತಳ್ತು ಪಾಯ್ವ[೨] ಕೆಂ
ಗಲಿಪ ಕಟಾಕ್ಷದಿಂದೆಡರೆ ನೋಡುವ ಕಾಡುವ ದಾಡೆಗುಟ್ಟುವ
ಗ್ಗಲಿಸಿ ತೊಡಂಕುವಬ್ಬರಿಸಿ ಪತ್ತುವ ಸುತ್ತುವ ಘೂರ್ಮಿಸುತ್ತೆ ಸಂ
ಚಲಿಪ ಧರಿತ್ರಿಯಂ ಟೊಣೆವ ಸೂಕರನಾಟವದೇನೞಲುಂಬಮೋ ೧೨

ತಿರುಗುತ್ತೊಂದೆರಡಡಿಯಂ
ಭರದಿಂ ನೋಡುತ್ತೆ ನಿಲುತೆ ಘೂರ್ಮಿಸುತುಂ ಕೊ
ಕ್ಕರಿಸುತ್ತಿದಿರಾಂತು ವಿಸಟಂ
ಬ್ಬರಿದುದು ಸುರಥೆದಿರೊಳರೆರೆ ಘೋರವರಾಹಂ ೧೩

ಮುತ್ತಿದರೆಮರ್ತ್ಯಲುಬ್ಧಕ
ರೆತ್ತಂ ಘಡಘಡಘೆನುತ್ತೆ ಕೂರ್ಗಣೆವಱೆಯಂ
ಸುತ್ತಿಱಿದು ಕಱಿದರೊರ್ದೊದ
ರುತ್ತ[೩]ಸಿಳಿಯಂ ಜಡಿದು[೪] ಝುಂಕಿಸುತ್ತಿದಿರಾದರ್ ೧೪

ಇಱಿ ಬರಿಯಂ ತರಿ ಕೊರಲಂ
ಮುಱಿ ಮೊಳೆಯನೆಡಗನುಗಿಯೆನುತ್ತ ಷವಷದಿಂ
ನೆಱೆ ಸುತ್ತಿದರೆರದೊತ್ತಿದ
ರೆಱೆ ಮುತ್ತಿದರೆಮರಲುಬ್ಧಕರ್ ಪಟುಕಿಟಿಯಂ ೧೫

ವಚನ

ಆಗಳವರ ಸಂರಂಭಮಂ ಕಂಡು ರೋಷಾವೇಷಮಂ ಕೆಯ್ಕೊಂಡು ದಾಡೆಗಡಿದು ಮಾರ್ಮಲೆತು ಮಾಮಸಕಂ ಮಸಗಿ,

---

೧ ರಿಸಿ (ತ, ಯ)
೨ ಪಾಯ್ದು (ಚ)
೩ ರುತ್ತರ (ಯ)
೪ ಜದಿ (ಕ, ಗ)

ಚಂಪಕ

ಒದೆದು ಧರಿತ್ರಿಯಂ ನೆಱೆ ಪುಟಂ ನೆಗೆದವಳ್ವಿಸುತ್ತೆ ತುಂಡಮಂ
ಬಿದಿರ್ದು ಕಡಂಗಿ ಗರ್ಜಿಸಿ ಘನಾಘನನಿಸ್ವನದಿಂ ತುಡುಂಕಿ ಪೊ
ಯ್ದುದು ಕುಡುದಾಡೆಯಿಂದಿಳಿದುದೆತ್ತಿದುದಿರ್ಬಗಿಯಾಗಿ ಕಾಯವೊ
ಟ್ಟಿದುದೆ ವರಟ್ಟಿಯಂ ಕೊಱೆದು ತಿಂದುದು ತೇಗಿದುದುಗ್ರಸೂಕರಂ ೧೬

ಎಚ್ಚಂ ಬುಗಳೆವು ರೋಮಮು
ನ್ನುಚ್ಚಳಿಸಲ್ಕಾಱದಲ್ಲಿ ತೊಡರ್ದಿರೆ ಕೊಡವು
ತ್ತುಚ್ಚರಿಯ ಮುಳ್ಪಂದಿವೊ
ಲ್ಲಚ್ಚಿಗಮಂ ಮಾಡಿ ಮಡಿಪಿದತ್ತದು ಸುರರಂ ೧೭

ವಚನ

ಆಗಳೆಚ್ಚಂಬಂ ಬಗೆಗೊಳದೆ, ಕನಲ್ಕೆಯಿಂ ಬಱಸಂದು ಬವರಿವರಿದು ತುಱುಗಿ ತುಡುಂಕುವ ಜಾಯಿಲ್ಲಂಗಳಂ ಲೆಕ್ಕಿಸದೆ, ಮಿಡಿಯಿಂ ಸಿರಂಬರಮೊತ್ತಿ ಸೀಳ್ದು ಸದೆವ ಸಮದಸೂಕರನಸಮಸಮರಾಟೋಪಮಂ ಸೈರಿಸಲಾರದೆ ಕಣ್ಗೆಟ್ಟು ಬೆನ್ಗೊಟ್ಟೋಡಿ ಬರ್ಪಮರವ್ಯಾಧಸಂಘದಭಿಷಂಗಮಂ ಪಿಂಗಡೆಯೊಳಂಗನೆವೆರಸು ಬನದೊಳೆರ್ವನೆ ಬಿನದಿಪ ಕಪರ್ದಿ ಕಂಡು, ಕರುಣಂ ಪುಟ್ಟೆ, ಜವದಿಂದಿವರ್ಗಂಜದಿರಿಮೆಂದಭಯಹಸ್ತಮಂ ನೆಗೆಪಿ ಮಡಿದಮರರ್ಗೆ ಸುವಿತ್ತು ಸಕ್ಷತಾಂಗರನ್ಗ ಕ್ಷತಾಂಗರನಾಕ್ಷಣಂ ನೆಗಳ್ದು೧, ನೆಗೞ್ವೆತ್ತ ನಿಜವಾಮಕರಕಲಿತಪ್ರಚಂಡಕೋದಂಡಕೋಟಿಯೊಳ್ ಮಂಜುಸಿಂಜಿನಿಯನಮರ್ಚಿ, ಕೆಯ್ಕೊಂಡು ತನ್ನನಗಲ್ದಲ್ಲಲ್ಲಿ ಸಂಚರಿಪ ಮನ್ನಣೆಯ ಗಣನಿವಹಂ ಕಳಕಳಮಂ ಕೇಳ್ದು ನಡೆತಂದೊಡನೆಯ್ತರೆ ಮುಂದಣ್ಗೆ ಸಾರ್ದಮರರಂ ಬೊನ್ಗೊಳ್ವ ಸಂವರ್ತಸಮಯಯುಮುಹಿಷೋಪಮಾನನಾದ ಭೀಕರಾಕಾರ೨ ಮೂಕಾಸುರ೨ನಂ ತೊಟ್ಟನೆ ಕಟ್ಟಿದಿರೊಳ್ ಕಂಡು, ಕಾಯ್ಪುಗೊಂಡು ಚಂಡದನುರ್ಗುಣಮಂ ನೀವಿ ಜೇವೊಡೆ೪ಯುಲೊಡನೆ,

ನಡುಗಿದುದಿಳೆ ಗಿರಿಶಿಖರಂ
ಕೆಡೆದುದು ಕದಡೆಲ್ದು ಜಡಧಿ ತುಳ್ಕಿದುದುಡುಗಳ್
ಬಿಡದುಳ್ಕಿದು೫ ವಹಿಪತಿ ಪೆಡೆ
ಯುಡುಗಿದನಿನಬಿಂಬಮುದಿರ್ದುದಳ್ಕಿದರಹಿತರ್ ೧೮

೧–೧ ಕ್ಷತಾಂಗರಂ ನೆಗಳ್ದು (ಯ)
೨–೨ ಮೂಕಸೂಕರ (ಗ, ಚ, ಜ, ತ)
೪ ಜೇವಡೆ (ಯ)
೫ ದುಳ್ಗಿದು (ಯ)

ಮತ್ತಮಾಗಳ್,

ಗಣತತಿ ಕಿಶಿಯಂ ಸದೆಯಲ್
ಕಣೆದುಡುಕಿರೆ ಪುರ್ಬಿನಿಂದೆ ಜರ್ಬುಕೆ ನಿಲಿಸು
ತ್ತಣಿಯುರವುಭವಂ ತೆಗೆದಂ
ಡೊಣೆಯಿಂ ಪೊಗರ್ವುಗುವ ನಿಶಿತತರಮಾರ್ಗಣಮಂ ೧೯

ವಚನ

ಅಂತುಮಾ[೧] ಕೂರ್ಗಣೆಯಂ ಮಾಣದೆ ಬಾಣಾಸನದ ಕಿರುವಾಯೊಳ್ ಪೂಡಿ ನೀಡಡಿಗೊಂಡಾಕರ್ಣಾಂತಂ ಸೆಳೆದು ಸುರರಂ ಪಿಂಗದೆ ನುಂಗಲ್ಕೆೞ್ತರ್ಪ ವಿಟ್ಟು ವಿನಂತದಿರದಿದಿರ್ಚಿ ಗರ್ಜಿಸುತ್ತುಂ ಬರ್ಪ ಬಲ್ಪಂದಿ[೨]ಯನೀಕ್ಷಿಸಿ[೨],

ಉತ್ಪಲ

ಪಂದಿಯಿದಂದಿನಗ್ಗದ ಗಜಾಸುರನಿಂ ಮದವತ್ತ್ರರಕ್ಷಸಂ
ಕ್ರಂದನವೈರಿಯಿಂ ಬಲದೊಳುಗ್ರತರಾಕೃತಿಯೊಳ್ ಪೊದಟ್ಟ ನಿ
ಷ್ಪಂದಪರಾಕ್ರಮುಸ್ಥಿತಿಯೊಳ್ವರ್ಮಡಿ ವೆಗ್ಗಳಮಪ್ಪುದಿಂದಿದಂ
ಕೊಂದಪೆನಾನೆ ವಿಕ್ರಮರಸಂತತಿಗೆಂತಿದು ವಧ್ಯಮಕ್ಕುಮೇ ೨೦

ವಚನ

ಎಂದು ಬಗೆದಂತಕಾಂತಕಂ ಪ್ರತಿಜ್ಞಾರೂಢನಾಗಿ,

ಪ್ರಕಟಪಟುರೋಷಬದ್ಧ
ಭ್ರುಕುಟಿ ಕರಾಳಾಸ್ತ್ರದಿಂದೆ ತೆಗೆನೆಱೆದೆಚ್ಚಂ
ಪ್ರಕುಟಿಲದಂಷ್ಟ್ರಾಭೀಷಣ
ವಿಕಟಾಂಗನನಾ ವರಾಹನಂ ಪುರಮಥನಂ ೨೧

ಎಚ್ಚೊಡಿಳೆಯುದಿರೆ ಶರಘೋರ
ದುಚ್ಚಳಿಸಿದುದೊಡಳಿದಱ ಕೆನ್ನೀರ್ ಭರದಿಂ
ಬೆಚ್ಚನೆ ಪಾಯ್ತರೆ ಕಣ್ಣರೆ
ಮುಚ್ಚುತ್ತುಂ ಮೂರ್ಛೆವೋದುದಲ್ಲಿ ವರಾಹಂ ೨೨

ವಚನ

ಅಂತು ಹಮ್ಮದಂಬೋಗಿ ವಜ್ರವಜ್ರನಿರ್ಘಾತದಿನೊರುಳ್ದ ನೀಲಾಚಲದಂತೆ ಪೊಡವಿಯೊಳ್ ಕೆಡೆದಿನಿಸಾನುಂ ಬೇಗದಿನೆೞ್ಚತ್ತು ಮದಮುಡಿಗಿ ಬೇರ್ವರಿವ ಭೀತಿಯಿಂ ಬೆಂಗೊಟ್ಟು ಪರಿದು,

---

೧. ಅಂತಾ (ಯ)  ೨-೨ ಯಂ ನಿರೀಕ್ಷಿಸಿ (ಚ)

ಮಡು ಗಿಡು ಸರು ದರಿ ಪಳ್ಳಂ
ಸಿಡುಂಬು ಮೆಳೆ ಬಳ್ಳಿ ಪುಲ್ ಪೊದಱ್ ಬೆಟ್ಟುಗಳಿ
ಟ್ಟೆಡೆ ಕುತ್ತುಱು ನಾನಲ್ಗಳೊ
ಳೆಡೆವಿಡದೋಡಿತ್ತು ಪಂದಿ ಜವೆದಿಂದಾಗಳ್ ೨೩

ಬೆಂಬೞಿವಿಡಿದಟ್ಟುತ್ತುಂ
ತಾಂ ಬರೆವರೆ ಬಿಡದೆ ಧಿಜ್ಯಧನು ಶಬರೇಶಂ
ಮುಂಬರಿದರ್ಜುನನಿರ್ದ ಬ
ನಂಬೊಕ್ಕುದು ಪಂದಿ ಸುೞಿದುದಾತನ ಬೞಿಯೊಳ್ ೨೪

ವಚನ

ಆಗಳ್ ಬೞಿವಿಡಿದು ಬಳಸಿ ಕವಿದು ಕುಱುಬೆಂದು ಬೊಬ್ಬಿಱಿವ ಸುರಕಿರಾತರಬ್ಬರಮಂ ಕೇಳ್ದದೆತ್ತಣದೆಂದು ಯೋಗಿ ಯೋಗಮನುಪಶಮಿಸಿ, ಕಣ್ದೆಱೆದು ಮುಂದಿರ್ದ ಭೀಕರಾಕೃತಿವೆತ್ತ ಮಹಾವರಾಹನಂ ನೋಡಿ, ಬನದ ತಪಸ್ವಿಗಳ್ಗುಪಹತಿಗೆಯ್ವುದಿದಂ ತವಿಪುದೆನಗೆ ಕರ್ತವ್ಯಮಕ್ಕುಮೆಂದು ನಿಜಕ್ಷಾತ್ರಧರ್ಮಮಂ ಬಗೆದು, ಮೂಡಿಗೆಯಿಂ ತೋಡಿಲ್ಲದ ಚಂಡಕಾಂಡಮನುಗಿದು, ಗಾಂಡೀವಿ ಗಾಂಡೀವದಿರ್ದೆಸೆಯು ಕೊಪ್ಪನಾರಯ್ದು ಪೆದೆಯಂ ತೊಡರ್ಚಿ ಜೇವೊಡೆದು ಪೂಡಿ ನೀಡಡಿಗೊಂಡು ತೆಗೆನೆಱೆಸಿಂದು,

ಕೆಡೆ ಕೆಡೆಯೆಂದಾರ್ದೆಚ್ಚಂ
ಘುಡುಘುಡಿಪ ಮಹಾವರಾಹನಂ ಕೂರ್ಗಣೆಯಿಂ
ಕಡುಗಲಿ ಪಾರ್ಥಂ ನೆಱನಂ[1]
ನಡೆಗೋಣಡಿಗೊಂಡು ಪಂದಿ ಕೆಡೆದತ್ತಾಗಳ್ ೨೫

ತರಳ

ಜವದಿನಲ್ಲಿಗೆ ಬಂದು ಶಂಕರನೆಂದನೀ ಕಿಟಿಯೆಮ್ಮದಾಂ
ತವಿಸಿದೆಂ ತೆಗೆಯೆಂದು ಭೂತಗಣಕ್ಕೆ ಪೇೞ್ದುದುಮಾಲಿಸು
ತ್ತ ವಿಕಲಂ ಕೆಡೆದತ್ತಿದೆನ್ನಯೆ ಬಾಣದಿಂ ಕಡೆಸಾರ್ ಬಿಡೆಂ
ದವನನೀಶ್ವರನೆಂದು ಬಲ್ಲನೆ ಪಾರ್ಥನೊತ್ತಿ ಕೆರಳ್ಚಿದಂ ೨೬

ವಚನ

ಮತ್ತಮಿಂತೆಂದಂ,

---

೧ ನೆಲ (ತ, ಯು)

ಎಲೆ ಶಬರ ಕಾಡ ಬಡನರಿ
ಮೊಲ ಪುಲ್ಲೆಗಳಲ್ಲಿ ನಿನ್ನ ಸಾಹಸಮುಂ ದೋ
ರ್ಬಲಮುಂ ಮೆಱೆಗುವುದಲ್ಲದೆ
ಚಲಗಿದಂಕನೊಳೆನ್ನೊಳಿಂತುಮೇಂ ಮೆಱೆದಪುದೇ ೨೭

ಬೇಡ ನಿನಗೇಕೆ ಸಾಹಸ
ದಾಡಂಬರಮೆನ್ನೊಳಾಹವಕ್ಕನುಗುಣನಂ[೨]
ಜೋಡಿಸು ನಿನಗುಳ್ಳೊಡೆಯುನೆ
ನೋಡಲದೇಂ ತೋರ್ಪೆನೆನ್ನ ಸಾಹಸಧೈರವಂ ೨೮

ಕರಿ ಕೇಸರಿಯಂ ಕೆಣಕಿದ
ಪರಿಯಂ ಪರುಟವಿ[೩]ಸದಿರ್ ಮದಾಂಧತೆಯಿಂದ್ರಾಂ[೪]
ತ್ಕರಿಬಲಬಲಾಹಕಪ್ರ
ಸ್ಫುರಿತಮಹಾನಿಲನೊಳೆತುಳಬಳಗಾಂಡಿವಿಯೊಳ್ ೨೯

ಚಂಪಕ

ಎನೆ ನಸುನಕ್ಕು ಮಾರರಿಪುವಾತನ ಧೈರ್ಯಮನಾತನಟ್ಟಿ ವೆ
ತ್ತನುಗತಶೌರ್ಯಮಂ ಬಱಿಯೊಳ್ ಸ್ವಗಜಾತೆಗೆ ಸೂಚಿಸುತ್ತೆ ಪು
ರ್ಬಿನ ಕೊನೆಸನ್ನೆಯಿಂ ಗೊರವ ನಿನ್ನಯ ಶೌರ್ಯಮದಿರ್ಕೆ ಖಡ್ಗಮೀ
ಧನುಶರಮೆತ್ತ ನಿನ್ನ ತಪಮೆತ್ತ ವಿಚಿತ್ರಮಿದಲ್ತೆ ಧಾತ್ರಿಯೊಳ್ ೩೦

ವಚನ

ಎಂದೇಳಿದಂಗೆಯ್ದು ನುಡಿದ ಕಪರ್ದಿಯ ಕಟೂಕ್ತಿಯಂ ಕೇಳ್ದು,

ವಿಪಿನಚರ ನಿನಗೆ ತಕ್ಕುದು
ಚಪಲಮೃಗವ್ರಜದ ಬೇಂಟೆಯುಜ್ಜುಗಮೆಮ್ಮೀ
ತಪದ ವಿಚಾರಂ ತಕ್ಕುದೆ
ವಿಪರೀತಂ ನಿನ್ನ ನುಡಿಯನೊಲ್ವರೆ ಬಲ್ಲರ್ ೩೧

---

೧ ಭಲ (ಕ, ಚ)
೨ ಗುಣವಂ (ಕ, ಗ, ಜ); ಗುಣವುಂ (ಚ)
೩ ಶವಿ (ಯ, ಜ)
೪ ಯಿಂದಂ (ಚ)

ಉತ್ಪಲ

ಎಂದವನುಕ್ತಿಯಂ ಗಿರಿಶನಾಲಿಸಿ ತಾಪಸ ಲೇಸನಾಡಿದಯ್
ಕುಂದದೆ ಬೇಂಟೆಯುಜ್ಜುಗಮಿದೆಮ್ಮಯೆ ಕಜ್ಜಮಿದಪ್ಪುದಪ್ಪುದಾ
ವಂದದಿನಿಂತು ನಿನ್ನವೊಲ್ದಾವನೊ ಶಾಂತಿಸಮಗ್ರನುಗ್ರಶಾ
ಯರ್ಗಂ ದಿಟನುಸ್ತ್ರಶಸ್ತ್ರಧರನಾದ ತಪಸ್ವಿ ಧರಾತಳಾಗ್ರದೊಳ್ ೩೨

ವಚನ

ಎಂದು ನುಡಿಯಲೊಡನೆ,

ಚಂಪಕ

ಕಟಕಿಯಿದೇಂ ಪುಳಿಂದ ಬಿಡು ನಿನ್ನ ದುರುಕ್ತಿಯನೆಮ್ಮ ವೃತ್ತಿಯಂ
ಪಟುತಪನಾಂತ ತಾಪಸರೆ ಬಲ್ಲರುದಾರಜಟಾಮೃಗಾಜಿನ
ಸ್ಫುಟಭಸಿತಂಗಳಂ ಶರಶರಾಸನಖಡ್ಗಮನಾಂತು ತಾಪಸೋ
ತ್ಕಟನೃಪಡರ್ಪನಾ ನೃಡನ ಶಿಷ್ಯತೆಯಾಂತೆನಗೇನಿದೊಪ್ಪದೇ ೩೩

ನೀನೆನ್ನೊಳಾಹವಕ್ಕೆ ಸ
ಮಾನನೆ ತೊಲಗಾಂಪ ಧೀರನಂ ಬರಿಸೀಗಳ್
ಕಾನನಚರ ಸಮರದೊಳಭಿ
ಮಾನಮನುಳಿಯನೆ ಮಹೇಶ್ವರಂ ಮುಗುಟ್ದಿಂದಂ ೩೪

ಏನಾದೊಡೇನೊ ನಿನ್ನ ತ
ಪೋನೀತಿಯದೆಂತದಿರ್ಕೆ ನಿನ್ನ ಧನುರ್ವಿ
ದ್ಯಾನಿಪುಣತೆಯೆಂತೆಂತನು
ಮಾನಮದೇಂ ತೋರ್ಪುದೆನ್ನೊಳಡಗಿ ನಿಸ್ಸರಿವೆಂ ೩೫

ಬಱಿದೇಕೆ ಗಳಪಿದಪೆ ನೀಂ
ಪೊಱಮಡು ಸಮರಕ್ಕೆ ನಿನ್ನ ಭುಜಬಲಧೈರವಂ
ನೆಱೆ ಕಾಣ್ಬೆನೆನ್ನ ಪಾಶುಪ
ತೆಱನಂ ಕಡೆಗಣ್ಚಿ ಪಿಂಗಿ ಪೆಱಸಾರ್ದಪನೇ ೩೬

ವಚನ

ಎಂದು ದೂರ್ಜಟಿ ಗರ್ಭಿರಧ್ವನಿಯಿಂ ಗಜರಿ ಗರ್ಜಿಸಿ ನುಡಿಯೆ,

---

೧ ತಿರ (ಯು) ೨ ಳದನಿನಿ (ಯು)

ಒಳಸೋರ್ದುದು ಶಾಂತಿರಸಂ
ಬೆಳೆತುದು ಕೋಪಾಗ್ನಿ ಪೊಗೆದುದ್ಧುಸಿರೊಳ್ ನಿಡುಗ
ಣ್ಣಳ ಕಡೆಯೊಳ್ ಕಿಡಿಗೆದರ್ದುದು
ಬಳಿಕ್ಕಲರ್ದುದು ಮೊಗದೊಳ್ಬಲರಿಪುನಂದನನಾ ೩೭

ಬಡಬಾಗ್ನಿಯುಳುರ್ಕೆಯೊ ಬಱ
ಸಿಡಿಲೇಳ್ಗೆಯೊ ಮುಳಿದ ಸಿಂಹದುಗ್ರತೆಯೊ ಪೊಡ
ರ್ಪಡಿದ ಲಯಕಾಲಮೃತ್ಯುವಿ
ನೆಡರ್ಪೊ ಎನೆ ಮಿಸುಪ ಮುಸಕಮಂ ತಳೆದನವಂ ೩೮

ಮಹಾಸ್ರಗ್ಧರೆ

ಪಟುಕೋಪಾಟೋಪಬದ್ಧ ಭ್ರುಕುಟಿ ವಿಚಳಿತಶ್ಮಶ್ರು ಘರ್ಮಾಂಬುಭಾಸ್ವ
ನ್ನಿಟಿಲಂ ಶೋಣಾಕ್ಷಿಕೋಣಂ ಪೆದೆಯನೆೞೆದು[1] ಗಾಂಡೀವದೊಳ್ ತೊಟ್ಟು[2] ರೌದ್ರೋ
ತ್ಕಟವೃತ್ತಂ ಜ್ಯಾರವಂಗೆಯ್ದಡಸಿ ಪಿಡಿದು ನಿಂದಿರ್ದ ಶಾಸ್ತ್ರಾಸ್ತ್ರಮಂ ಸಂ
ಘಟಿಸುತ್ತುಂ ಮಾಣದೆಚ್ಚಂ ಕಪಟಶಬರನಂ ಕೊಳ್ಳೆನುತ್ತುಗ್ರ ಪಾರ್ಥಂ ೩೯

ಮತ್ತೇಭ

ಅದು ಪಿಂತಾಗಿರೆ ಮತ್ತಮೊಂದು ಶರಮೆಯ್ದತ್ತಂತದಂ ಪಿಂದುಗೆ
ಯ್ದೆ ದಱುತ್ತುಂ ಪೆಱತೊಂದ್ದುಮಾರ್ಗಣಮುಳುಂಬಂ ಪಾಯ್ದುದಂ ಬೊಂದು ಪೇ
ಣ್ದದಱಿಂ ಮುಂಚಿ ಪಳಂಚಿ ಪಾಱಿದುದು ತಿಬ್ಬಂ ಬಾಣಮನ್ಯಂ ಬಱಿ
ಕ್ಕೈದುಮಂ ದಾಂಟಿ ಕಡಂಗಿ ಸೈವರಿದುದೇನೆಂಬೆಂ ತದಾಟೋಪಮಂ ೪೦

ಗಿರಿಯುಗ್ರದೊಳ್ನೆಱೆ ಕಱೆವಂ
ಶರವೃಷ್ಟಿಯನಾತ್ಮಜನಕನಿಂದ್ರನೆನುತ್ತುಂ
ಪುರುಡಿಸಿ ಶರವೃಷ್ಟಿಯನಾ
ಗಿರಿಶಾಗ್ರದೊಳೆಯ್ದೆ ಕಱೆದನರ್ಜುನನದಟಂ ೪೧

ಚಂಪಕ

ಒದೆದೆಡೆಗೊಂಡ ಬಿಲ್ಲ ತಿರುವಂ ಮೊರೆದಟ್ಟರದಿಂ ಪಳಂಚಿ ವೇ
ಗದೊಳೆದಿರಾಂತು ಬಲ್ಗರಿಯ್ಯು ಗಾಢಮನೊಡಂಬಡೆ ಮೀಱಿ ಪಾಱಿ ಪುಂ
ಖದ ಪೊಳೆಪುರ್ವೆ ಮುಮ್ಮೊನೆಯ ಕೆಂಗೆಡಿ ಸಾಲಿಡೆ ರೂಢಿ[3]ಸುತ್ತೆ ಪಿಂ
ಗದೆ ಪೊಗರ್ವಾಂತ ಕೂರ್ಗಣೆಗಳೇಂ ಪರಿತಂದುವೊ ಪಾಂಡುಪುತ್ರನಾ ೪೨

---

೧ ನೆಳವಿ (ಯ) ೨ ಕೊಟ್ಟು (ತ) ೩ ಜಾಡಿ (ಯ)

ಮತ್ತಂ,

ಮತ್ತೇಭ

ಧರೆಯೆತ್ತಾಗಸಮೆತ್ತ ತಳ್ತ ದೆಸೆಯೆತ್ತೆಂಬಂತೆ ಮತ್ತಂ ಧನು-
ರ್ಧರಪಾರ್ಥಂ ಬಿಡದೆಚ್ಚ ಮಾರ್ಗಣಕದಂಬಂ ಧಾರೆಯಿಂ೧ ಪೊಣ್ಮಿದ
ಳ್ಪುರಿ ವಿದ್ಯುದ್ದ್ಯುತಿವಿಸ್ಫುಲಿಂಗತತಿ ಸುತ್ತಂ ಸೂಸೆ ಪಾಯ್ತಂದು ನಿ
ರ್ಭರದಿಂ೨ ತೀವಿದುವೆಂಬಿನಂ ಬಿಗಿದುವಂ ಮುತ್ತಿ೩ ದತ್ತೆಂಬಿನಂ ೪೩

ಉತ್ಪಲ

ಮಂಜಿನ ಪುಂಜವೊತ್ತರಿಸಿ ಮುತ್ತಿ೩ ಮುಸುಂಕೆ ಭಯಾರ್ತಿಗೊಳ್ವನೇ
ಕಂಜಸಖಂ ಪತಂಗತತಿ ಪಾಯ್ದೊಡೆ ಬೆರ್ಚುಗುಮೇ ದವಾಗ್ನಿ ವಾ
ತಂ ಜವದಿಂ ಪಳಂಚೆ ಗಿರಿ ಕಂಪನಮಾಂಪುದೆ ಪಾಂಡುಪುತ್ರನಾ
ತಂ೪ ಜಡಿದೊತ್ತೆ ಜಾಱಿ೫ ಪೆಜಿಸಾರ್ವನೆ ಧೀರಧನಂಜಯಾಂಬಕಂ ೪೪

ಮೊರೆದು ಪರಿತಂದು ಮಶಕೋ
ತ್ಕರಮೊತ್ತಂ ಕವಿಯೆ ಸೆಡೆವುದೇಂ ಮದಗಜಮಾ
ನರನೆಚ್ಚ ಗಱಿಗಣೆಗಳ್ಗಾ
ವರಿಸಿ ಕರಂ ಮುತ್ತೆ ಮೃತ್ಯುಹರನಂಜುವನೇ ೪೫

ಆಗಳ್,

ಚಂಪಕ

ಮುಳಿದು ಗಜಾಸ್ಯನಬ್ಬರಿಸಿದಂ ಕೆರಳ್ದಂ ಗುಹನಲ್ಲಿ ರೋಷಮು
ಜ್ಜ್ವಳಿಸಿ ಗಣಾಳಿ ಗರ್ಜಿಸಿದುದಾ ನರನೇಱಿಗೆ ಚಿತ್ರಮಾಂತದೇಂ
ಕಳಕಳಮೆನ್ನ ಭಕ್ತನವನೀತನೊಳಾಂಪ ವಿನೋದವನ್ನುಂಟು ನಿ
ಶ್ಚಳತೆಯೊಳಿರ್ಪುದೆಂದವರ್ಗೆ ನೇಮಿಸಿದಂ ಕರುಣಾಬ್ಧಿ ಶಂಕರಂ ೪೬

ವಚನ

ಅನಂತರಮಾ ಶಬರಶಂಕರಂ ಪ್ರಚಂಡಧನುರ್ದಂಡಮಂ ಕೆಯ್ಕೊಂಡು ತಿರು ವೊಯ್ದು ಜೇವೊಡೆದು ಬಾಣಮಂ ಪೂಡಿ ತೆಗೆನೆಱಿದೆಚ್ಚಾಗಳ್,

ನರನೆಚ್ಚ ಕಣೆಗಳಂ೬ ಕ
ತ್ತರಿಸಿದುವವನೊಡಲನಂಟದೆಳೆಗೆ ಜಿಗಿದುವೇ
ಶ್ವರನಾಣತಿಯಿಂದಾತನ
ಪೊರೆಯೊಳ್ ಪುರಮಥನನೆಚ್ಚ ಪೊಸಕೂರ್ಗಣೆಗಳ್ ೪೭

೧ ಧಾತ್ರಿಯಿಂ (ಯ) ೨ ಜರರರಂ (ಯ) ೩ ಮುತ್ತೆ (ಜ) ೪-೪ ಪಾರ್ಥಪತ್ರಜಾತಂ (ಜ, ಯ) ೫ ಪಾರಿ (ಯ) ೬ ಕಣೆಗಳವ (ಜ)

ಮಹಾಸ್ರಗ್ಧರೆ

ಶರವೃಂದಂ ಮಾಣದೆಲ್ಲಂ ಕಡಿವಡೆಗಿಂದಳೆಯೊಳ್ ಬೀೞೆ ಕರ್ಣಾರಿ ಕೋಪಾ
ತುರಚಿತ್ತಂ ಮತ್ತಮೆಚ್ಚಂ ಕಿವಿವರೆಗುಗಿದ್ದುದ್ದಂಡಕಾಂಡಂಗಳಂ ಶಂ
ಕರನಾ ಬಾಣಂಗಳಂ ಖಂಡಿಸಿ ಮಗುಟ್ಟು ನಿಜಾಸ್ತ್ರಂಗಳಿಂದೆಚ್ಚನಾಗಳ್
ಬೆರಳೆತ್ತುತ್ತೆಯ್ದೆ ಕೊಂಡಾಡಿದನವನ ಮಹಾಶೌರ್ಯಮಂ ಪಾಂಡುಪುತ್ರಂ ೪೮

ಎಲೆ ಶಬರ ನಿನ್ನ ಪೃಥುಭುಜ
ಬಲಮೊಳ್ಳಿತ್ತೆಸುಗೆ ಪೊಸತು ಬಿಲ್ಲಾಳ್ತನದೊಳ್
ಕಲಿ ನೀನಲ್ಲದೆ ಪೆಱರಾರ್
ಚಲದಿಂ ಸಮನೆನಿಸಿ ಕಾದಿದಯ್ ಬಿಡದೆನ್ನೊಳ್ ೪೯

ಅರರೆ ಭವದೀಯಸಾಹಸ
ಧರನತಿಶಯಮೆಂದು ಪೊಗೞ್ದು ತೊಟ್ಟೆಚ್ಚಂ ದ
ಳ್ಳುರಿ ಸೂಸುವ ಧಾರೆಯ ಕಿಡಿ
ಸುರಿವ ನಿಶಾತಾಸ್ತ್ರಬೃಂದಮಂ ಕಲಿಪಾರ್ಥಂ ೫೦

ಶರವರ್ಷಮನೇ ಕಱೆವುದು
ಪಿರಿದೆ ಮಹಾಕಾಲಮೇಘಮರ್ಜುನಜಲದಂ
ಭರದಿಂದದಿರಾಂತನವಧಿ
ಶರವರ್ಷಮನಲ್ಲಿ ಕಱೆದುದಿದು ಚಿತ್ರತರಂ ೫೧

ಮತ್ತೇಭ

ಶಿವನಿಂ ದಿವ್ಯತಪಾಸ್ತ್ರಮಂ ಪಡೆಯಲೆಂದೇಳ್ತಂದಂದು ಪಾರ್ಥಂ ಮಹೋ
ತ್ಸವದಿಂದಂ ತನಗುಳ್ಳ ಸರ್ವಶರಮಂ ದೇವೇಶ ನೋಡೆಂದು ತೋ
ರ್ಪವೊಲೆಚ್ಚಂ ಕಡಿದಾ ಕಳಂಬಮನಿತಂ ನಿನ್ನಿಷ್ಟಮಾದಸ್ತ್ರಮಂ
ತವೆ ನೋಡೆಂದವನಲ್ಲಿ ತೋಱುವವೊಲಾತಂಗೆಚ್ಚನುಗ್ರಾಂಬಕಂ ೫೨

ವಚನ

ಅಂತೆಚ್ಚ ಪುಳಿಂದಪುರಾಂತಕನ ಬಿಲ್ಬನ್ನಣಕ್ಕೆ ಬೆರಗುವಟ್ಟು,

ಚಂಪಕ

ನರಸುರದಾನವಾದಿಗಳೊಳೆನ್ನ ಶರಾಹತಿಗೊಡ್ಡಿ ನಿಲ್ವರಿ
ಲ್ಲರಿದರಿದಾರ್ಪುಗುಂದದಿದಿರೊಳ್ ನೆಱೆ ನಿಂದೆ ಕಿರಾತ ದಲ್ಲಿ ನೀ
ನ್ನೆರುತರಸಾಹಸಾಂಕನೆನಿಪಯ್ ಸಿನಗಾರ್ ಸರಿವರ್ಪರಿನ್ನದೋ
ಸರಿಸದೆ ನಿಲ್ವುದೆನ್ನುಮೆನುತುಂ ಪೊಗೞ್ದಾ ತನನೊಲ್ದು ಫಲ್ಗುನಂ ೫೩

---

೧ ಕಡಿಯೊಡೆ (ಚ) ೨ ಬಲ (ಚ) ೩-೩ ಲೆಂದೇಳ್ತಂದು (ಯ) ೪ ಸುರನರ (ಯ)

ಜಗಜಗಿಸುವ ಮೂಡಿಗೆಯಿಂ
ತೆಗೆದುಂ ದಿವ್ಯಾಸ್ತ್ರವೃಂದಮಂ ಮಂತ್ರಿಸುತುಂ
ಮುಗುಳ್ಚೆ ಚ್ಚನ್ನಾರ್ಪು ಮಿಗೆ ಪ
ನ್ನಗಧರನಂ ಪಟುಪರಾಕ್ರಮಂ ಪಾಂಡುಸುತಂ ೫೪

ಮಹಾಸ್ರಗ್ಧರೆ

ಎನಿತಂ ತಾನೆಚ್ಚನಸ್ತ್ರಪ್ರಕರಮನಭಿಮಂತ್ರಾನ್ವಿತಂಗೆಯ್ದು ಕೂರ್ಪಿಂ
ದೆನಿತಂ ಕಾಲಾಂತಕಂ ನುಂಗಿದನಸವಸದಿಂದಂತದಂ ಕಂಡುಮೀಶ
ಕ್ತಿನಿಯುಕ್ತಂ ವ್ಯಾಧನಲ್ಲಂವನೊ ತಿಳಿವಪೆನೆಂಬೀ ವಿಚಾರಕ್ಕೆ ಪಕ್ಕಾ
ದನೆ ಪಾರ್ಥಂ ಕ್ಷಾತ್ರದುಷ್ಟಾಮುಸಮುಡಸಿದವಂಗೆಕ್ಕುಮೇ ಸದ್ವಿವೇಕಂ ೫೫

¹ಕೊಂಡಾಹವದಹನದೊಳೆಂ¹
ಪಾಂಡವನಂ ಪೊರ್ದಿದಕ್ಷಯಾಸ್ತ್ರಾಂಬುಧಿಯುಂ
ಖಂಡಪರಶುಪ್ರತಾಪಾ
ಖಂಡಿತಬಡಬಾಗ್ನಿ ಪೀರ್ದುದೆನಿಸ್ಸುಟಿಯದವೋಲ್ ೫೬

ಸವೆದುದು ನಿಷಂಗಶರತತಿ
ಸವೆಯದು ಕೋಪಾಗ್ನಿ ತಿಳಿವು ಮುಸುಳ್ದುದು ಸಮುಗ್ರೋ
ತ್ಸವಮತಿ ²ಸಲೆ ಕಳೆಯೇಱಿದು²
ದವಂಗೆ ಪಶುಪತಿಯ ಮಾಯೆಯುಂ ಮೀಱುವರಾರ್ ೫೭

ಉತ್ಪಲ

ಶಂಕರನೆಂಘ್ರಿಪಂಕಜದ ಸೇವೆಗೆ ಕಂಟಕನಾದನೇ ಪುಳಿಂ
ದಂ ಕರಘಾತನುರ್ಕನುಗಿವೆಂ ಬಿಡೆನೆಂದು ಜಯೋದ್ಯಮಕ್ಕೆ ನಿಃ
ಶಂಕತೆವೆತ್ತು ನಿರ್ಭರದೆ ಗರ್ಜಿಸಿ ಮುಂಬರಿದೆತ್ತಿ ಚಾಪದಿಂ
ದಂ ಕಲಿಪಾರ್ಥನಪ್ಪಳಿಸಿದಂ ಪಟು ಪೊರ್ದದ ಚಂದ್ರಮೌಳಿಯಂ ೫೮

ದಂಡೆಗೊಳುತ್ತದಂ ಪೊಳೆದು ಚಿಮ್ಮಿದನೀಶ್ವರನಲ್ಲಿ ಮೇಣದಂ
ಕಂಡು ಕನಲ್ಕೆಯಿಂ ಮುಗುಳ್ಚಿ ಬಳ್ಕಿದನೇ ಹತನೆಂದು ಚಂಡಕೋ
ದಂಡಮನೆತ್ತಿ ಪೊಯ್ದು ಸವನೀಶನ ಪೇರುರಮಂ ಕಪರ್ದಿ ಮುಂ
ಕೊಂಡು ಮೃದುಸ್ಮಿತಂ ಮಿಸುಗೆ ತದ್ಧನುವಂ ಸೆಳೆದಂಕರಾಗ್ರದಿಂ ೫೯

---

೧–೧ ಖಾಂಡವವನದಹನದೊಳೆಂದಾ (ಯ, ರ)
೨–೨ ಕಳೆಯೇರಿದುದಂ (ಯ); ಮಿಗೆ ಕಳೆಯೇರಿದು (ರ)

ವಚನ

ಅಂತುಮಾ ಗಾಂಡೀವಕೋದಂಡಮನುದ್ದಂಡಚಂಡಿಕಾರಮಣಂ ಸೆಳೆದುಕೊಳ್ವುದುಮುತಿರೋಷಕಷಾಯಿತಕಟಾಕ್ಷನಾಗಿ,

ಚಂಪಕ

ತಿಳಿವೆಣಮಿಲ್ಲದೆಟ್ಟಿರದ ತಾಮಸಪಕ್ಷಕೆದೊಳ್ಪಟ್ಟಿಡಾಯುಧಂ-
-ದಳಿಧೊಱೆಯಿಂದೆ ಕೀಲ್ತು ಜಡಿದಾರ್ದು ಪಳಂಚಿ ಕಿರಾತ ಬೀೞೆನು
ತ್ತೊಳಱಿ ಕಡಂಗಿ ಪೊಯ್ದು ಸ್ವಭವಾಂಗಮನರ್ಜುನನಾ ಪುರಾರಿ ಕೆಯ್ಯ
ಚಳಕದಿನೇಟ್ಟು ಕೊಂಡನದನಾಗಳೆ ಕೆಯ್ ಬಱಿದಾಯ್ತು ಪಾರ್ಥನಾ ೬೦

ಶರತತಿಯೆಲ್ಲಂ ಬಯಲಾಗಿ
ಯುರುಧನುವುಂ ಪೋಯ್ತು ಡಾಯುಧಂ ಜಗುೞ್ದುದು ಕೋ
ಡಿರ[2]ದದಿರ್ದಿಭದ[2]ವೊಲಿರ್ದಂ
ನರನೀಶ್ವರನೊಡನೆ ಸದರಮಪ್ಪುದೆ ಸಮರಂ ೬೧

ಮತ್ತೇಭ

ಶರಚಾಪಾಯುಧಮೆಲ್ಲಮುಂ ಜಗುೞ್ದೊಡೇಂ ಬೆನ್ನಿತ್ತನೇ ಸಾಧ್ವಸಾಂ-
-ಕುರಮಂ ತಾಳ್ದನೆ ಪಾರ್ಥನಂದಮುಮ ಶೌರ್ಯೋದ್ರೇಕದಿಂದುರ್ಬಿ ಪೆರ್
ಮರಗೊಂಬಂ ಮುಱಿದಿಟ್ಟನಾತ್ಮಕರದಿಂ ಕಿೞ್ತಿತ್ತಿ ಕಲ್ಗುಂಡ ಬಲ್
ಸರಿಯಂ ಸೂಡಿದನಂತದಂ ಕಡಿದನೊಂದಂಬಿಂದೆ ಮೃತ್ಯುಂಜಯಂ ೬೨

ವಚನ

ಅಂತು ಕಡಿದು,

ಎಲೆ ಗೊರವ ಚಾಪಬಾಣಾ
ವಳಿಯುಂ ಖಡ್ಗಮುಮನಕಟ ನೀಗಿದೆ ನಿನ್ನೀ
ಚಲಮುಂ ಬಲಮುಮನೆನ್ನೊಂ
ದೆಲಗ್ಗುಳಿಯೊಡೆ ತಂದು ತಾಳ್ದು ಮೆಱೆ ಬಱಿಕೆವ್ನೊಳ್[3] ೬೩

ಇಲ್ಲದೊಡೆಲ್ಲೆನ್ನತ್ತಪೆ-
ನೆಲ್ಲಿಯೆ ನಿಂತಾ[4]ಯುಧಂಗಳಂ ಪಿಡಿ ರಣದೊಳ್
ಗೆಲ್ಲಲ್ಕೆ ಸಾರ್ದು ಕಲಿ ನೀ
ನೆಲ್ಲಂದದಿನೆನ್ನೊಳಾಂತು ಗೆಲ್ವುದೆ ಕಜ್ಜಂ ೬೪

ವಚನ

ಎನೆ ಧನಂಜಯಂ ದರಸ್ಮಿತಾಸ್ಯನಾಗಿ,

---

೧ ಬರಿದಾ (ಯ) ೨–೨ ದಂಡಿದಿಭದ (ಯ); ಡಿರದಿರ್ದಿಭದ (ರ) ೩ ಕೆನ್ನೊಳ್ (ಕ, ಯ)
೪ ನಿನ್ನಾ (ಯ)

ಮತ್ತೇಭ

ಇನಿತೊಂದುರ್ಬಟೆಯೇಂ ಪುಳಿಂದ ಬಿಡು ನಿನ್ನೀ ಬಿಂಕಮಂ ಮಾಣ್ಗೆ ಶ
ಸ್ತ್ರನಿಶಾತಾಸ್ತ್ರ ನಿಕಾಯ್ಯುದಿಂ ನೆಗಳ್ವ ಯುದ್ಧಂ ಮುಷ್ಟಿಯುದ್ಧಕ್ಕೆ ೧ನಿಂ
ಧನು೧ವಾಗೀಗಳೆ ತೋರ್ಪೆನೆನ್ನ ಬಲವದ್ದೋರ್ದಂಡಶೌರ್ಯಪ್ರವ
ರ್ತನಮಂ ನೋಡುಗೆ ನಿನ್ನ ನಚ್ಚಿನ ಕಿರಾತವ್ರಾತಮೆನ್ನಂದಮಂ ೬೫

ವಚನ

ಎಂದು ನುಡಿದ ಸಂಕ್ರಂದನನಂದನನ ನಿರರ್ಗಳನಿಸ್ಸಹಾಯಪರಾಕ್ರಮೋಕ್ತಿಗೇಳ್ದು ನೆರೆದ ಗಣಸಂದೋಹಮಂದಾಶ್ಚರ್ಯಮಂ ತಾಳ್ದು ನಲವೆರ್ಚೆ ಪೊಗಳ್ತರೆ ಬೞಿ ನಿಂದಿರ್ದ ಗಿರಿನಂದನೆಯೊಡನೆ ಗಿರೀಶನಿಂತೆಂದಂ :

ಚಂಪಕ

ಎಲೆ ಗಿರಿಜಾತೆ ನೋಡಿವನ ಸಾಹಸಮಂ ಸಲೆ ನಾಲ್ಕು ತಿಂಗಳುಂ
ವಿಲಸಿತಜೀರ್ಣಪರ್ಣಮನೆ ಮೆಲ್ದುೞಿದೊಪ್ಪುವ ನಾಲ್ಕು ತಿಂಗಳ್
ಗ್ಗಲಿಸಿದ ವಾಯುವಂ ಸವಿದು ನಿಗ್ರಹಿಸಿರ್ದ ಶರೀರದಿಂದಿದೇಂ
ಕಲಿಯೊ ಕಡಂಗಿ ಕಾದಿದನಿವಂ ಸಮುದಂಡಿಯೊಳೆನ್ನೊಳರ್ಜುನಂ ೬೬

ಉತ್ಪಲ

ಕಾದುವ ಕೆಯ್ದು ಪೋದುದೆನುತಳ್ಕಿದನೇ ಭುಜಶೌರ್ಯಶಕ್ತಿ೨ಗೆಂ
ಟಾದುದೆ ಸಾರವೀರರಸಮೇಂ ಬಿಸಿಗುಂದಿದುದೇ ಸಹಾಯಮಂ
ಸಾದರ೩ಮೊಚ್ಚತಂ ಪಡೆವೆನೆಂಬಭಿಲಾಷೆಯನಾಳ್ದುದೇ ಮನಂ
ಕಾದಲೆ ನೋಟ್ಪುದೀತನ ಸಮಗ್ರಪರಾಕ್ರಮಮುರ್ವಿ ಪೆರ್ಚು೪ಗುಂ ೬೭

ಕುಲಗಿರಿ ಸಂಚಲಿ೫ಸಿದೊಡಂ
ಜ್ವಲದೌರ್ವ ತಂಪನಾಳ್ದೊಡಂ ರವಿಬಿಂಬಂ
ಸಲೆ ಕರ್ಗಿ೬ದೊಡಂ ರಣದೊಳ್
ಕಲಿ ಪಾರ್ಥಂ ಭೀತಿವಟ್ಟು ಬೆನ್ಗೊಟ್ಟ೭ಪನೇ ೬೮

ಮಹಾಸ್ರಗ್ಧರೆ

ಹರಿಯುಂಶೋ೮ದ್ಭೂತನೀತಂ ಶುಭಗುಣನಿಧಿ ಮತ್ಪಾದಭಕ್ತಂ ಸಪತ್ನೋ
ತ್ಕರಸಂಹಾರಾರ್ಥಮೆನ್ನೊಳ್ ಪಡೆಯಲೆಳಸಿ ದಿವ್ಯಾಸ್ತ್ರಮಂ ದಲ್ ತಪಸ್ಸಂ
ಚರಣಾಂಬೆಕ್ಕಿಲ್ಲಿ ನಿಂದಂ ಕಿಟಿಯ ಕತ್ತದೆ ಮದ್ವೇಷಮಂ ತಾಳ್ದಿದಂ ಸಂ
ಗರಮಂ ಕೆಯ್ಕೊಂಡಿವಂಗಿತ್ತ ಪೆಸವನೆಳಸಿರ್ದಸ್ತ್ರಮಂ ಶೈಲಪುತ್ರೀ ೬೯

---

೧-೧ ನೀನನು (ಯ) ೨ ಶಕ್ತಿಶೌರ್ಯ (ರ) ೩ ಸಾಧನ (ಚ) ೪ ಪರ್ವ (ಯ) ಸಂಚರಿ (ಕ, ಗ, ತ, ರ) ೬ ಕುರ್ಗಿ (ಚ, ಜ, ರ); ತರ್ಗಿ (ಯ) ೭ ಬೆನ್ನೊಡ್ಡಿ (ಚ) ೮ ವಂಶೋ (ಯ)

ಮತ್ತೇಭ

ಶರದಭ್ಯರ್ಥನದಿಂ ತಪಃಸ್ಥಿತಿಯೊಳಿರ್ದುರ್ಗಂ೧ ಶಾಂತಿಯಂ ಮಾಣ್ದು ಸೂ
ಕರನಂ ಬಾಣದಿನೆಚ್ಚದಂ ಬಯಸುತೆನ್ನೊಳ್ ಕಾಳೆಗಂಗೆಯ್ದನೇ
ನರನೆಂದಾತನ ದೋಷಮಂ ನೆನೆಯದಾಡಂ ಕೀರ್ತಿಸುತ್ತಿರ್ದನೀ
ಶ್ವರಿಯೊಳ್ ಶಂಭುಗೆ ಭಕ್ತವತ್ಸಲತೆ ಸಲ್ಗುಂ ಮೇಣ್ ಪೆಱರ್ಗೆಕ್ಕುಮೇ ೭೦

ವಚನ

ಎನಿಸಿ ಭಕ್ತಜನಪ್ರಣಯಲೀಲಾಲಾಲಸಂ ಶೂಲಧರನೊಯ್ಯನೆ ಪೊಗೞ್ದ ನಂತರಂ ಮುಷ್ಟಿಯುದ್ಧಸನ್ನದ್ಧನಾಗಿ ನಿಂದ ಪಾರ್ಥನೆದಿರ್ಗೆವಂದೋರೊರ್ವರುದೀರ್ಣರೋಷಾವೇಶಪುರುಷ೨ಪಾಟಲಿತಕಟಾಕ್ಷದಿನೆಡರೆ ನೋಡಿ ಬಾಹಾಸ್ಫಾಲನಂಗೆಯ್ಯಲೊಡನೆ,

ತುಳ್ಕಿದುದಂಬುಧಿ ತಾರೆಗ
ಳುಳ್ಕಿದುವಾಗಸದೆ ನಡುಗದತ್ತಿಳೆ ಫಣಿಪಂ
ಬಳ್ಕಿದನಗಶಿಖರಂಗಳ್
ಕಳ್ಕನೆ ಕೆಡೆದುವು ತದೀಯಪಟುನಿಸ್ವನದಿಂ ೭೧

ವಚನ

ಅನಂತರಮುರ್ಬರರುಂ೩ ನಿರ್ಭರದಿಂದುರ್ಬಿ ಬೊಬ್ಬೆಗೊಟ್ಟಬ್ಬರಿಸಿ ಗಜರಿ ಗರ್ಜಿಸಿ ಕಡಂಗಿ ಕೆಯ್ವಿಡಿದು ಪಳಂಚಿ ಪತ್ತಿ,

ಚಂಪಕ

ಕುಲಗಿರಿಯುಗ್ಮಮಾಳ್ದ ಪುರುಷಾಕೃತಿಯಿಂದೆ ಪಳಂಚುವಂತಿರು
ಜ್ಜ್ವಲಭುಜಭಾಬ್ಧಿವಹ್ನಿಯುಗಮಾಂತು ನರಾಂಗಮನಪ್ಪಿ ಕಾದುವಂ
ತಲಘುಮೃಗಾಧಿಪದ್ವಯಮೊಡಂಬಡೆ ಮಾನವವೇಷಮುರ್ಕಿ ಸಂ
ಚಲಿಸದೆ ಪೋರ್ವವೊಲ್ ಪೊಣರ್ದುರ್ಬಿ ವೃಷಧ್ವಜನುರ್ಕಟಧ್ವಜರ್ ೭೨
ಪಿಡಿಯೆ ಕರಾಗ್ರಮಂ ಬಿಡಿಸುತೌಂಕೆ೪ ಬಿದಿರ್ಚುವ ತಟ್ಟಿಗೆಯ್ಯೆ ಮೆಯ್
ಗೊಡಪಿ ತೆರಳ್ಚುವವ್ವಳಿಸೆ ಸಿಲ್ಕದೆ೫ ಲಂಘಿಪ ಸಂಚಿನಿಂದೆ ಪೊ
ಯ್ದೊಡೆ ಪೊಳೆವಾರ್ಪಿನಿಂದೆ ಜಿಗೆ ಚಿಮ್ಮುವ ಬಾಹುಗಳಿಂದೆ ಕಂಠಮಂ
ತೊಡರೆ ಕುನುಂಗಿ೬ ಪಯ್ಸರಿಪ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ ೭೩

ಮತ್ತಂ,

---

೧ ಳಿರ್ದಂ (ಚ, ಯು) ೨ ಪೌರುಷ (ಕ) ೩ ಮಿರ್ವರುಂ (ಯು) ೪ ವೌಂಕೆ (ಚ, ಯು)
೫ ನಿಲ್ಕದೆ (ಚ) ೬ ಕುಸುಂಗಿ (ತ)

ಚಂಪಕ

ಪೊಗುವ[೧] ತೊಡಂಕುವೆತ್ತುವ ಬಿದಿರ್ಚುವೆದಿರ್ಚುವ ಪಾಯ್ವ ಪೊಯ್ವ ಪಿಂ
ದೆಗೆವ ಮರಲ್ವ ಮೇಲ್ವರಿವ ಪೊಂಗುವ ಪಿಂಗುವ ನೂಂಕುವೊಂಕುವಾ
ರ್ದೊಗೆವ ಕನಲ್ವ ಜಾರುವ ಜವಂಗೆಡದೊತ್ತುವ ಪತ್ತುವೞ್ಕಿನಿಂ
ಬಿಗಿವ ತುಡುಂಕುವವ್ವಳಿಪ ಬಿನ್ನಣವೊಪ್ಪೆ ಪಗಿಲ್ತು ಕಾದಿದರ್ ೭೪

ಮತ್ತೇಭ

ತಳಹತ್ತಂ ದಣು[೨]ವಟ್ಟೆ ಖೊಪ್ಪರವಮುರೋಬಂಧಂ ಲತಾಬಂಧವು
ಜ್ಜ್ವಳಶಾಖಾಚರಬಂಧವಾಯತಿಕೆಬಂಧಂ ಡೊಕ್ಕರಂ ಪಟ್ಟಿಸಂ
ವಳಯಾವೇಷ್ಟನವಹ್ನಹಸ್ತಂ ಭುಜಗಬಂಧಂ ತೋರಹತ್ತಂ ಶಿರೋ
ವಳಯಂ ಬಾಹುತಳಂ ಚಮತ್ಕರಿಸೆ ನಾನಾಕೌಶಲಂದೋಱಿದರ್ ೭೫

ಮುರಿವ ಮುಳಿ[೩]ದೊತ್ತುವಾರ್ದು
ಪ್ಪರಿಸುವ ಬೀಟ್ವೀಟ್ವ ಸುೞಿವ ಸುತ್ತುವ ಡಗೆಯುಂ
ತರಹರಿಪ ಸಾರ್ವ ಪಾರ್ವು
ಬ್ಬರಿಪೆಸಕಂ ಮೀಱಿ ಕಾದಿದರ್ ಕಡುಗಲಿಗಳ್ ೭೬

ನಿಡುಸುಯ್ಯಿಂ ಭುಗಿಲೆನೆ ಪೊಱ
ಮಡೆ ಪೊಗೆ ಮಿಗೆ ಮುಷ್ಟಿ[೪]ಯುಗಳಘಟ್ಟನದಿಂ ಕೆಂ
ಗಿಡಿ ಕೆದಱಿ ಗರ್ಜನಕ್ಕೆಳೆ
ನಡುಗೆ ಮಹಾಹವಮನೆಸಗಿದರ್ ಧುರಗಲಿಗಳ್ ೭೭

ಮತ್ತೇಭ

ಪದಘಾತಕ್ಕೆ ಧರಾತಳಂ ಕುಸಿಯೆ ಕೂರ್ಮಂ ಕುರ್ಗೆ ಭೋಗೀಂದ್ರನ
ಗ್ಗದ ದೀರ್ಘಸ್ಫುಟ ಕಂಠದೊಳ್ ನೆಲಸೆ ಬಾಹುಭ್ರಾಂತಿಸಂಜಾತವಾ
ತದ ಘಾತಕ್ಕೆ[೫]ಪಯೋಧರಂ ಕೆದಱಿ ಬಾನೊಳ್ ಜೀರ್ಣಪರ್ಣಂ ದೞೊ[೬]
ಡ್ಡಿದ ವಿದ್ಯಾಧರಪುಷ್ಪಕಂ ಜೆಗುೞೆ ಯುದ್ಧಂಗೆಯ್ದರೀಶಾರ್ಜುನರ್ ೭೮

ತೊಡೆಯುಂ ಪೊಡೆಯುಂ ಭುಜಮುಂ
ಮುಡುಪುಂ ಪೇರುರಮುಮಳಿಕಮುಂ ನೆತ್ತಿಯುಮುಂ
ಪೆಡತಲೆಯುಂ ಬರಿಯುಂ[೭] ಕಾ
ಯ್ಪಿಡಿಪೊರ್ವರನೊರ್ವರೆಣ್ಮೆ ಪೊಡೆದರ್ ಕಲಿಗಳ್ ೭೯

---

೧ ಪುಗುವ (ಯು) ೨ ಧಣು (ಯು) ೩ ಮುರಿ (ಯು) ೪ ಮುಟ್ಟಿ (ಹಸ್ತ ಪ್ರತಿಗಳಲ್ಲಿ)
೫ ಪಾತಕ್ಕೆ (ಯು) ೬ ಪರ್ಣಂಬೊ (ಯು) ೭ ಬದಿಯಂ (ಗ, ತ)

ಸೋಲಿಸೆ ಜವಮುದು ಜವಮಂ
ಸೋಲಿಸೆ ಲುಳಿ ಲುಳಿಯ ಬಿನ್ನಣಂ ಬಿನ್ನಣಮಂ
ಸೋಲಿಸೆ ಪೊಯ್ಲುಗಳ್ ಪೊಯ್ಲುಗಳ್
ಸೋಲಿಸೆಯುಂ ಸೋಲಲೊಲ್ಲರಾರ್ತರ್ ಕಲಿಗಳ್ ೮೦

ಕ್ಷತರೇಖೆ ತಟ್ಟಲೀಯದೆ
ಮತಿ ಮಿಗೆ ಸಮದಂಡಿಗೆಯ್ದನೆವನೆಂದು ಸಮು
ನ್ನತರೋಷದಿಂದೆ ಶಿವಿದಂ
ಶತಮಖಸುತನಿತನುಹರನ ವಕ್ಷಃಸ್ಥಳಮಂ ೮೧

ಆ ಕೆಯ್ ಮುಂಚದ ಮುನ್ನಂ
ಲೋಕೈಕಾಧೀಶನೆತ್ತಿ ದೃಢಮುಷ್ಟಿಯನಾ
ಪಾಕರಿಪುತನಯನಂಗಮ
ನಾ ಕಪಟಕಿರಾತನೇವಿ ಮೆಲ್ಲನೆ ಶಿವಿದಂ ೮೨

ಚಂಪಕ.

ತರಹರಿಸುತ್ತೆ ಮತ್ತೆ ಪೊಡೆದಂ ನರನೀಶನ ವಕ್ಷಮಂ ಸುಧಾ
ಕರಧರನಾರ್ದು ಮೇಳೈಜಿಗಿದಂ ಕಲಿಪಾರ್ಥನನಾ ಧನಂಜಯಂ
ಮರಳ್ದು ಮಹೇಶನಂ ಶಿವಿದನಂತಕಮರ್ದನನಾ ಕ್ಷಣಂ ಪುರಂ
ದರಸುತನುತ್ತಮಾಂಗ್ರದೆಡೆಯಂ ಪೊಡೆದಂ ಸುರರಲ್ಲಿ ನೋಟ್ಪಿನಂ ೮೩

ಅವರೆರ್ವರ ಕಾಳೆಗಮಂ
ಸವೆಯದ ಸಾಹಸಮನೀಕ್ಷಿಸಿದ ಸುರಗಣಮುಂ
ಶಿವಗಣಮುಂ ವಿಸ್ಮಯು[೧]ಮಂ
ತವೆ [೨]ತಾಳ್ದುದು ಮಚ್ಚಿ[೨] ಪೊಗಳ್ದು ಧಗ[೩]ರಿಪುಸುತನಂ ೮೪

ಮತ್ತಮಾಗಳ್,

ಚಂಪಕ

ಶಿವ ಶಿವ ಸತ್ತ್ವಮೆಂತುಟೊ ತಪಸ್ವಿಗವಂಗೆ ಮರುನ್ನಿಷೇವಣಂ
ಸವನಿಷ್ಠೆ ದಂಡಿಸಿದ್ದೊರ್ಕ್ಕಿಡಲೊಳದ್ಭುತಮೆನ್ನೊಡನೀತನಂತೆ ಕಾ
ದುವ ಕಲಿಯಾವನೀ ಭುವನದೊಳ್ ಸಮದಂಡಿಯೊಳ್ಪುದ್ದಸಾಹಸಾ
ರ್ಣವನಿವನಲ್ತೆ ಸದ್ಗುಣಕೆಸೂಯೆಯೆ ಕಾಣೆನಿವಂಗೆ ಸಾಟಿಯಂ ೮೫

೧ ವಿಸ್ಮಿತ (ಕ) ೨–೨ ತಾಳ್ದದಮರ್ಚ (ಕ, ಗ, ಜ, ತ)
೩ ಬ್ದರಗ (ಎಲ್ಲ ತಾಡವಾಲೆ ಪ್ರತಿಗಳಲ್ಲಿ)

ವಚನ

ಎಂದುಮಾರಮಣಂ ನಿಜರಮಣಿಯೊಡನೆ ಕಿರೀಟಿಯಂ ಪೊಗೞುತ್ತಿರ್ಪಿನಮಾ—
—ತನ್ನಿದಿರ್ಗೆವಂದು ಮಾರ್ಕೊಂಡು,

ಉತ್ಪಲ

ಎನ್ನ ಭುಜಾಗ್ರವಿಕ್ರಮಕೆ ಮೆಚ್ಚಿದೆ ನೀಂ ಭವದೀಯಸಾಹಸ
ಕ್ಕಾನ್ನೆಱೆ ವಿಸ್ಮಯಂಬಡೆದೆನೆನ್ನ ಪೊಣರ್ಕೆಗಿದಿರ್ಚಿ ನಿಲ್ವ ಧೀ
ರೋನ್ನತರಿಲ್ಲ ದೇವದನುಜರ್ಕಳೊಳೊರ್ವನೆ ನಿಂದು ಕಾದಿದಯ್
ಬಿನ್ನಣದಿಂದೆ ಭಾಪು ಶಬರೇಂದ್ರ ಎನುತ್ತುರೆ[೧] ಮೆಚ್ಚಿ ಫಲ್ಗುಣಂ ೮೬

ಮಾಣದೆ ಮತ್ತೆ ಱಿಗಿದನಾ
ಸ್ಥಾನುವನಬ್ಬರಿಸಿ ಸಿಡಿಲ ಮಾಱ್ಕೆಯೊಳ್ಭವಂ
ಕಾಣುತ್ತದಂ ಸೈರಿಸುತುಂ
ಕ್ಷೇಣಂಬಡೆದೊತ್ತಿ ಮೆಟ್ಟಿದಂ ಗಾಂಡಿವಿಯಂ ೮೭

ಒಕ್ಕುದು ನೆತ್ತರ್ ಬಾಯಿಂ
ಮಿಕ್ಕಲದರ್ಸಿರಿಡುವ ಮೂಗಿನೆರಡುಂ ಕಡೆಯಿಂ
ದಕ್ಕಟ ತಪ್ಪಾಯ್ತೆನುತುಂ
ಮುಕ್ಕಣ್ಣಂ ಮಱುಗಿ ಮನದೆ ಸಿಡಿಮಿಡಿಗೊಂಡಂ ೮೮

ವಚನ

ಅಂತು ಮರುಗಿ ಕರುಣಾಕರಂ ಕಪರ್ದಿ ಕೆಯ್ದುಗೆದು ನಿಂದಾಗಳ್,

ಚಂಪಕ

ಬಱಿತುದು ಧೈರ್ಯಮಾರ್ಗಿ ಱಿನಾದುದು ಪೆರ್ಚಿದ[೨] ಶಕ್ತಿ ಬಿಂಕಮಂ
ತೊಱೆದುದು ಚಿತ್ತವೃತ್ತಿ ನೆಱೆ ನೆಗೆದುದಿಂದ್ರಿಯರಾಜಿ ಬೀತುದೆ
ಬ್ಬಱುವೊಳಸೋರ್ದುದು[೩]ತ್ಸವಮಡಂಗಿದುದುನ್ನತಿ ಕುಂದನಾಳ್ದೆನಂ
ಜಱಿಕದ ಹೇವಮಾವರಿಸೆ ನೊಂದು ಪಲುಂಬಿದನಾ ಧನಂಜಯಂ ೮೯

ಅಳ್ಳಱಿದುದು ಮಾನಸಮುಂ
ತಳ್ಳಂಕಂ ತನು ಬೆಮರ್ತುದಾಹವಧೀಸಕಂ
ಪೊಳ್ಳಾದುದು ಚಿಂತೋ[೪]ದ್ಗಮ
ಮುಳ್ಳಲದರ್ಧವಂಗೆ ಸೋಲದಿಂ ಸುಖಮೊಳವೇ ೯೦

ಮತ್ತಂ,

---

೧ ತ್ತಿರೆ (ಯ) ೨ ಪೆರ್ಚಿನ (ಯ) ೩ ಸಾರ್ದುದು (ಜ) ೪ ಚೇತೋ (ಚ); ಚಿತ್ತೋ (ಗ, ತ)

ಪೞಯಿಸಿದಂ ಪಂಬಲಿಸಿದ
ನೊಳಗಾಱಿದನಾರ್ಪುಗುಂದಿದಂ ಬೇವಸದಿಂ
ಕಳವಳಿಸಿದನಾ ಪರಿಭವ
ದೞುರ್ಕೆಯಿಂ ನೊಂದಗ[೧]ನೆಂದ ಪಾರ್ಥಂ[೧] ಪಾರ್ಥಂ ೯೧

ವಚನ

ಅಂತುನೊಂದು,

ಒಳಗೊಳಗಟ್ಟಿಲ್ದು ಚಿಂತಾ
ಕುಳತೆಯುನೊಳಕೊಂಡು ಬೇಡನವನೆನ್ನಿಂದ
ಗ್ಗಳಿಸಿದನೆ ಮತ್ಪರಾಕ್ರಮ
ವೊಳಸೋರ್ದುದೆ[೨] ಚಿತ್ರಮೆಂದವಂ ಖತಿ[೩]ಗೊಂಡಂ ೯೨

ಚಂಪಕ

ಶಿವಪದಭಕ್ತಿಯಂ ತೊಱೆದೆನೋ/ ಶಿವನಿಂದೆಯನೆಯ್ದೆ ಕೇಳ್ದೆನೋ/
ಶಿವನಿಜಭಕ್ತರಂ ಪೞಿದೆನೋ/ ಶಿವಪೂಜೆಯು[೪]ಗೆಯ್ಯದನ್ನಮಂ
ಸವಿದೆನೊ/ ಶೈವಸುವ್ರತಮನಾಳ್ದೆಡೆವಿಟ್ಟೆನೊ-ಪೂರ್ವಜನ್ಮದೊಳ್/
ಶಿವ ಶಿವ ತಾನದಲ್ಲದೊಡೆ ಸಾರ್ಗುಮೆ ಸಂಧನಗೀ ಪರಾಭವಂ ೯೩

ಎಲ್ಲಂದದಿನಾಹವದೊಳ್
ಗೆಲ್ಲಂ ಶಬರಂಗೆ/ ಸೋಲಮೆನಗಾಯ್ತು ಕಟ
ನ್ನೆಲ್ಲಿಯದು ವಿಜಯನಾಮಸ
ಮುಲ್ಲಸಿತಖ್ಯಾತಿಯೆಂದು ಬಿಸುಸುಯ್ವುತ್ತುಂ ೯೪

ಜಗದೇಕವೀರಶಬ್ದಂ
ನಗೆಗೆಡೆಯಾಯ್ತೆನಗೆ ಪರ್ಬಿದತ್ತೆಣ್ದೆಸೆಯೊಳ್
ನೆಗಟ್ದ ಪರುಶವಿನೀ ಶಬರನಿ
ನೊಗೆದ ಪರಾಭೂತಿಪೆತ್ತ ಕಾರಣದಿಂದಂ ೯೫

ಎತ್ತಣ ಬನಮೆತ್ತಣ ಕಿಟಿ/
ಯೆತ್ತಣ ಕಾೞ್ಬಯದಸಾಗವಂ/ ಶಿವ ಶಿವ ಮೇ
ಣೆತ್ತಣ ಕಾಳೆಗದುಜ್ಜುಗ
ಮೆತ್ತಣ ಪರಿಭವಮಿದೆನಗೆ ಸಾರ್ದುದು ಚಿತ್ರಂ ೯೬

---

೧-೧ ನಂದು ಪಾರ್ದಂ (ಜ); ನಂದು ಪಾರ್ಥಂ (ಕ, ಗ, ತ) ೨ ಸಾರ್ದುದೆ (ಗ, ಚ, ತ)
೩ ಕತಿ (ಕ, ಗ) ೪ ಪೂಜನೆ (ಯು)

ಈತಂ ನರನಕ್ಕುಮೊ ಪಡಿ
ಮಾತೇಂ ಮುಗುಟ್ದಾನೆ ಶಬರನಪ್ಪೆನೊ ರಣಸಂ
ಜಾತಜಯಲಕ್ಷ್ಮಿ ಶ್ರುಗದ
ಬೂತಾಟವೊ ತಿಳಿಯೆನೆಂದವಂ ಚಿಂತಿಸಿದಂ ೯೭

ವಚನ

ಎಂದು ತನ್ನೊಳಾಲೋಚನಂಗೆಯ್ದು,

ಚಂಪಕ

ತಿಳಿದನೆ ಶಂಭುವೆಂದು ತಡಿಸಂದು ಮಹೋಜ್ಜ್ವಳಶೈವಶಕ್ತಿಯು
ಗ್ಗಳಿಕೆಯ ಕಂಡು ಕಂಡುಷುವನಾಹವದೊಳ್ ತಿಳಿಯಲ್ಕೆ ಸಾಧ್ಯಮೇ
ವಿಳಸಿತವೇದರಾಶಿ ಸಲೆ ಕಾಣದ ದೇವನನದ್ವಿತೀಯನಂ
ತೊಳಗುವಖಂಡಚಿನ್ಮಯನನಾತ್ಮವಿಗುಪ್ತನಪ್ರಮೇಯನಂ ೯೮

ತಪಸ್ಸಿನೊಳ್ಸಾರ್ದುದು[1] ಮಂತ್ರದ
ಜಪಮುಳಿದುದು ತೊಲಗಿದುದು ಮಹೇಶಧ್ಯಾನಂ
ಕುಪಿತಂಗೆನಗಂತದಱಿಂ
ದ್ವಿಪಜಯಮಿದು ನೆಗಟ್ದು ಥಲ್ಲದೊಡೆ ಸಮನಿಪುದೇ

ವಚನ

ಎಂದು ಪಲವಂದದಿಂ ಪಲುಂಬಿ ವಿರೂಪಾಕ್ಷನುಪೇಕ್ಷೆಯಿಂದೀ ಪರಾಜಯಂ ತಗಳ್ದುದೆಂದು ನಿಜಾಂತರಂಗದೊಳ್ ಬಗೆದು, ಕರುಣಾಬ್ಧಿಯಪ್ಪ ಶಂಕರನಂ ಕಿಂಕರತೆಯಿಂ ಸರಣ್ಬೊಕ್ಕು, ತತ್ಕಾರುಣ್ಯಂಬಡೆದು ಪಗೆಯಂ ಪರಾಭವಿಪೆನೆಂದು ಕೌಂತೇಯಂ ಚಿಂತಾಪಂಕಮಂ ವಿವೇಕಜಳದಿಂ ತೊಳೆದು ವಿಮಳಮನಸ್ಕನಾಗಿ;

ಚಂಪಕ

ಪರಮಶಿವಾಗಮೋಕ್ತವಿಧಿ[2]ಯಿಂ ಮಣಲಿಂ ನೆಗಟ್ದೊಂದು ಲಿಂಗಮಂ
ನಿರುಪಮಭಕ್ತಿಯಿಂ ತಿಟಿದು[2] ಪಚ್ಚಳಿ ಬಂದುಗೆ ಕಕ್ಕೆ[3] ಮುತ್ತ ಪಾ
ದರಿಗಳ ಪೂಗಳಂ ಮೃದುಳಬಿಲ್ವದಳಂಗಳನಲ್ಲಿ ತಂದು ಶಂ
ಕರನನೊಲಲ್ದು ಪೂಜಿಸಿದನರ್ಥಿ ತದ್ವೈರಿಜಯಂ ಧನಂಜಯಂ ೧೦೦

ಬಲವಂದು ರುದ್ರಸೂಕ್ತಮ
ನೊಲವಿಂದೋದುತ್ತೆ ಮಣಿದು ಮುಗಟ್ದಿ ಜಗಿ ವಿನಿ
ರ್ಮಲಭಕ್ತಿಭಾವದಿಂ ಸಾಂ
ಜಲಿನಿಟಲಂ ನಿಗಮವಂದ್ಯ[4]ನಂ ಕೀರ್ತಿಸಿದಂ ೧೦೧

೧ ಸೋರ್ದುದು (ಯ, ರ) ೨-೨ ಯಿಂದಲಿ ತನ್ನಯ ಚಿತ್ತಶುದ್ಧದಿಂ ತಿಳಿದು ವನೇಜ ಪೊಲ್ಲೆ ವರ (ಚ) ೩ ಎಕ್ಕೆ (ಚ) ೪ ವೇದ (ಯ)

ತ್ರ್ಯಂಬಕ ಜಯಜಯ ವಿಧಿಕ್ರಮ
ಳಾಂಬಕಶತಮುಖಮುಖಾವನತಪದ ಭುವನಾ
ಳಂಬಕ ಗಳರುಚಿಜಿತರೋ
ಳಂಬಕ ಹೇರಂಬಜನಕ ಜಿತಕುಸುಮಶರಾ ೧೦೨

ಚಂಪಕ

ಜಯ ಜಯ ಕಾಲಕಾಲ ಫಣಿಭೂಷಣಭೀಷಣ ಸೋಮ ಕೋಮಲಾ
ಶಯ ಯಮಿನುತ್ಯ ನಿತ್ಯ ಶಿತಿಕಂಧರ ಸಿಂಧುರಕೃತ್ತಿವಸ್ತ್ರ ದು
ರ್ಜಯ ಭವಭಂಜನಾಂಜನವಿವರ್ಜಿತ ನಿರ್ಜಿತಘೋರಮಾರ ನಿ
ರ್ಜಯ ಭುವನೇಶ ಪಾತಕಹರ ಕಿಂಕರಶಂಕರ-ಪುಷ್ಟಿವರ್ಧನಾ ೧೦೩

ನಿನ್ನ ಪದಭೃತ್ಯನೆನಿಸಿ
ರ್ದೆನ್ನಂ ಗೆಲ್ದಂ ಕಿರಾತನೇತನಸೇಗಳ್
ಬನ್ನಂಬಡಿಸುತೆ ಸೋಲಿಪ
ಪನ್ನತಿಕೆಯನಿತ್ತು ಪೊರೆ ಕೃಪಾಳುಗಳರಸಾ ೧೦೪

ಎನ್ನಾಳ್ದಂ ನೀನಿರುತಿರೆ
ಬನ್ನಘುದೆನಗಾಗೆ ಕೊಱತೆಯಾವಂಗೆಂಬಾ
ಬಿನ್ನಣಮಂ ತಿಳಿದೆನ್ನಂ
ಮನ್ನಿಸಿ ರಿಪುಜಯಮನಿತ್ತು ಪೊರೆ ಪುರಮಥನಾ ೧೦೫

ವಚನ

ಎಂದು ಪಲವಂದದಿಂ ನುತಿಸಿ ದೈನ್ಯಂದೋಱ ಪಾರ್ಥಂ ಪ್ರಾರ್ಥಿಸಿ ಶಬರಂಗಭಿಮುಖನಾಗಿ ನಿಂದು ನಿರೀಕ್ಷಿಸಿ ನಿಜಭುಜಾಸ್ಫಾಲನಂಗೆಯ್ದು

ಉತ್ಪಲ

ಇನ್ನೆಱಿಯಲ್ಕೆ ಬರ್ಪುದೆಲೆ ಧೂರ್ತಕಿರಾತ ಭವತ್ಪರಾಕ್ರಮ
ಪ್ರೋನ್ನತಿಯೆಂಟರಂ ಪೊಱಮಡೆನ್ನಧಿನಾಥಮಹೇಶನೊಲ್ಮೆ-ಚಲ್
ಸನ್ನಿದವಾಗಿದುದ್ದೆಂದೆನಗೆ ನಿನ್ನಸುವಂ ನೆಱೆ ಪೀರ್ವೆನಾವದೇ
ವನ್ನನಗೋತು ಬರ್ಪನವನಂ ಸದೆದಿಕ್ಕುವೆನೀಕ್ಷಣಾರ್ಧದೊಳ್ ೧೦೬

ವಚನ

ಎಂದು ರೋಷಾರುಣೇಕ್ಷಣದಿನೀಕ್ಷಿಸುತ್ತಿರೆಯಿರೆ,

---

೧ ಭಕ್ತ (ಚ) ೨ ಬಿಡಿ (ಗ, ತ) ೩ ದುನ್ನತಿ (ಚ) ೪ ಸನ್ನಿಧಿಯಾ (ವ) ೫ ದಿನ್ನೆ (ಚ)

ಚಂಪಕ

ಸಲೆ ನೆಲಸಿರ್ದ ಸುಣ್ಮಣಲ ಲಿಂಗದೊಳಂ ಶಬರಾಂಗದೊಳ್ ಸಮು
ಜ್ವಲನರವಕ್ತ್ರಸಂಭವಮನಾ ಸ್ತವಮುಂ ಪೞಿಯುಂ ಕಪರ್ದಿ ಮಂ
ಜುಲಗುಣವಾರ್ಧಿ [೧]ಕೇಳ್ದು ಸೈರಡಂ[೧] ಸರಿಗಂಡು ಮನೋನುರಾಗಸಂ
ಕುಲತೆಯಸಾಳ್ದನಂತೆ ನುತಿಯುಂ ಪೞಿಯುಂ ಸಮನಲ್ತೆ ಭವ್ಯರೊಳ್ ೧೦೭

ತರಳ

ಮಣಲ ಲಿಂಗದ ಮಸ್ತಕಾಗ್ರದ ಪುಷ್ಪಮಂಜರಿ ಮಾಣಧಾ
ಕ್ಷಣಮೆ ತಳ್ಮಡರ್ದ್ದ ಕಿರಾತನ ಮಂಡೆಯಲ್ಲಿರೆ ಕಂಡು ಕಾ
ರಣಮಿದೇಂ ಪೊಸತೆಂದು ಸಾದ್ಭುತಮಾನಸಂ ಮುಗುೞ್ದೀಕ್ಷಿಸು
ತ್ತಣಿಯರಂ ಬಿಡದಿತ್ತ ಲಿಂಗದ ಶೂನ್ಯಶೀರ್ಷಮನರ್ಜುನಂ ೧೦೮

ಮತ್ತೇಭ

ಇದನಿನ್ನುಂ ಮುಗುೞ್ದೊರ್ಮೆ ನೋೞ್ಪೆನೆನುತುಂ ಪೂಗೊಂಚಲಂ ತಂದು ಸೂ
ಡಿದನಾ ಲಿಂಗದ ಮಸ್ತಕಾಗ್ರದೊಳೆ ಸಮ್ಯಗ್ಭಕ್ತಿಯಿಂದಾಗಮೋ
ಕ್ತದ ಮಾರ್ಗಂಬಿಡಿದೊಲ್ದು ಪೂಜಿಸಿ ಕರಂ ಕೊಂಡಾಡಿ ಮೆಯ್ಯಿಕ್ಕಿ ನೋ
ಡಿದನತ್ತಲ್ ಶಬರೋತ್ತಮಾಂಗದೆಡೆಯಂ ಪ್ರಾಂಜಲು ಣಂ ಫಲ್ಗುಣಂ ೧೦೯

ಉತ್ಪಲ

ಕಂಡನಖಂಡಪುಷ್ಪಭರಮಂಜರಿಯಂ ಶಬರೋತ್ತಮಾಂಗದೊಳ್
ಮಂಡಿತಲಿಂಗಮಸ್ತಕದೊಳಂತದನೀಕ್ಷಿಸಿ ಕಾಣದಾದನಾ
ಖಂಡಲಸೂನುವದ್ಭುತರಸಂಬಡೆದಾೞ್ದು ಪಯಾಬ್ಧಿಯಲ್ಲಿ ಮುಂ
ಕೊಂಡು ಮುಳುಂಗಿ ತೇಲ್ದುವವನೀಕ್ಷಣಯುಗ್ಮಪಯಶ್ಚರದ್ವಯಂ ೧೧೦

ಚಂಪಕ

ಹರ ಹರ ದೇವದೇವನಿವನಲ್ತೆ ಶಿವಂ ಭುವನೈಕವಲ್ಲಭಂ
ಗುರು ಸಕಳಾಮರರ್ಗೆ ಶಬರಾಕೃತಿಯಿಂ ಮುದನುಗ್ರಹಾರ್ಥಮೀ
ಪರಿ ನಡೆತಂದನಲ್ತೆ ತಪದುಬ್ಬೆಗದುದ್ಭ್ರಮೆ ನೆತ್ತಿ[೨]ಪತ್ತಿ[೩] ಸೈ
ತಿರದೆ ಮರುಳ್ತನಂದಳೆದಿದಿರ್ಚಿಜಿನೆನ್ನವೊಳಜ್ಞನಾವನೋ ೧೧೧

ವಚನ

ಎಂದು ಬಗೆದಾಗಳ್,

ಚಂಪಕ

ಪಡಿದೆೞೆದಂತೆ ಪಾೞ್ತೆರ್ದೆ ಪವ್ವನೆ ಜುಮ್ಮೆನೆ ಮೆಯ್ಯನಿರ್ ಪೊದ
ೞ್ದಡಿಕಿೞ್ದತ್ತು ಘರ್ಮಜಲಮುಣ್ಮಿದುದಂಗದೊಳಾಗ್ರಹಗ್ರಹಂ
ಕಡೆಸಾರಲಿತ್ತು ಕೌತುಕರಸಂ ಬಗೆಗುರ್ವಿದುದುತ್ಸವಂ ಮಡ
ಲ್ತಡರ್ದುದು ಭೀತಿ ಬೇರ್ವಿೞ್ದುದಪೇೞ್ ಯನೆಳ್ದುದು ರಾಗಸಂಪದಂ ೧೧೨

---

೧-೧ ಕೇಳ್ದು ಪೊರೆಪಂ (ಚ) ೨ ಹನ (ಯು) ೩ ಪತ್ತಿ (ಜ)

ಮತ್ತಂ,

ಉತ್ಪಲ

ಬ್ಬಿತುದು ಬಿಂಕಮೋಡಿದುದು ಮೂಢತೆ ಮೂಡಿದುದಶ್ರು ಕಣ್ಗಳೊಳ್
ಕಾತುದು ಭೀತಿವಲ್ಲರಿ ಮನೋಗದಮ್ಮುಂ ತಱಿಸಂದು ನಿಂದುದು
ದ್ಭೂತಮಹಾದ್ಭುತಂ ಮನದೊಳಂಗದೊಳಾಯ್ತು ವಿವರ್ಣವೃತ್ತಿ ಚಿಂ
ತಾತುರನಾಗಿ ಬೆಳ್ಪಳಿಸಿ ಬೇವಸಮುಂ ತಳೆದಂ ಧನಂಜಯಂ ೧೧೩

ಉಱಿವೆಳಗು ಸಂಜೆ ನಸುಮ
ಬ್ಬಳುರ್ದ್ದಂಬರದಂತೆ ತಿಳಿವು ರಾಗಂ ನೆಗಟ್ಟ್ವ
ಮ್ಮಳವನೊಳಕೊಂಡ ಬಗೆಯಿಂ
ತಳವೆಳಗಾಗುತ್ತೆ ಪಾರ್ಥನಿಂತೆಂದಂ ೧೧೪

ಚಂಪಕ

ತಿಳಿದೆನೆ ಶಂಭುವೆಂದು ಬಹುಬಾಣದಿನೆಚ್ಚೊಡೆ ತಾಗದಂತದೇಂ
ತಿಳಿದೆನೆ ದಿವ್ಯಮಾರ್ಗಣದಿನಾನೆಸೆ ತಳ್ವದೆ ನುಂಗಿದಂತದೇಂ
ತಿಳಿದೆನೆ ಕೆಯ್ಯ ಚಾಪಮನಡಾಯುಧಮಂ ಸೆಳೆದೀಟ್ಟು ಕೊಂಡೊಡಂ
ತಿಳಿವೊಳಸಾರ್ದುದಕ್ಕಟ ಪುರಾಕೃತಕರ್ಮದ ಪೆರ್ಮೆಯೆಂತುಟೋ ೧೧೫

ಉತ್ಪಲ

ಆವನ ಮಾಯೆಯಿಂ ತ್ರಿಜಗಮಾದುದು ಸೂರ್ಯಸುಧಾಕರರ್ ಪೊದ
ಳ್ದಾವನ ತೇಜದಿಂ ಬೆಳಗುವರ್ ಭುವನೋತ್ಕರರಕ್ಷೆ ಶಿಕ್ಷೆ ಮೇಣ್
ಆವನಧೀನಮಾವನೊಳೆ ತೋರ್ಪುದು ವಿಶ್ವಮಿದೆಂದುಮಾ ಮಹಾ
ದೇವನೊಳಾಹವಂ ಗಡೆನಗದ್ಭುತಮದ್ಭುತಮೇನನೆಂದಪೆಂ ೧೧೬

ಆವನನರ್ಚಿಪರ್ ಮಖದೊಳಾವನಮಂತ್ರಜಪಂಗಳಿಂದೆ ಸಂ
ಭಾವಿಪರಾವನಂ ಭಜಯಿಪರ್ ಮುನಿಗಳ್ ಮನುಗಳ್ ಸುಭಕ್ತಿಯಿಂ
ದಾವನ ಪಾದಪದ್ಮಮನೆ ಜಾನಿಪರಗ್ಗದ ಯೋಗಿವರ್ಯರಾ
ದೇವನೊಳಕ್ಕಟಾ ಪೊಣರ್ದೆನೆನ್ನದೊ ಸಂದ ವಿಮೋಹದೆಟ್ಟರಂ ೧೧೭

ಅನವದ್ಯನೊಳಪ್ರತಿಮನೊ
ಳನಘನೊಳಾದ್ಯಂತಶೂನ್ಯದೊಳ್ ಸಕಲಜಗ
ಜ್ಜನಕನೊಳಭ್ಯರ್ಹಿತಚೇ
ತನಗತನೊಳದಿರ್ಚಿ ಧುರದೊಳೆಚ್ಚಾಡಿದೆನೇ ೧೧೮

೧ ಸೋರ್ದು (ಯ)

ಪರಮೈಶ್ವರ್ಯಾಸ್ಪದನೊಳ್
ಪರಿಪೂರ್ಣಪರಪ್ರಕಾಶನೊಳ್ ಪಶುಪತಿಯೊಳ್
ಪರಶಕ್ತಿಯುಕ್ತನೊಳ್ ಪರ
ತರಮಹಿಮನೊಳಾಂ ಕದಿರ್ಚುಗತೆಚ್ಚಾಡಿದೆನೇ ೧೧೯

ಸ್ವಸಮಾನಾಧಿಕರಹಿತನೊ
ಳಸಮಾಕ್ಷನೊಳಾಗಮೌಘಜನಕನೊಳಸುರ
ಪ್ರಸರಪ್ರಹಾರಿಯೊಳ್ ತಾ
ಮಸರಹಿತನೊಳಾಂ ಕದಿರ್ಚುಗತೆಚ್ಚಾಡಿದೆನೇ ೧೨೦

ಪ್ರಣವಾರ್ಥನೊಳನುಪಮಗುಣ
ಗಣಯುತನೊಳತರ್ಕ್ಯವಿಭವನೊಳ್ ಶ್ರುತಿನಿವಹ
ಪ್ರಣುತನೊಳಖಿಳಸುಪರ್ವಾ
ಗ್ರಣಿಯೊಳ್ ಸೆಣಸಾಂತು ಮೃಡನೊಳೆಚ್ಚಾಡಿದೆನೇ ೧೨೧

ಗಿರಿಧನ್ವನೊಳಲ್ಪಧನು
ರ್ಧರನಾಂ ಸೆಣಸಲ್ ಸಮರ್ಥನೇ ಹರಿಶರನೊಳ್
ಪರಿಗತಕೃಶಶರನಖಿಳಾ
ಮರವರನೊಳ್ ನರನತರ್ಕ್ಯಮಹಿಮನೊಳಬಲಂ ೧೨೨

ಚಂಪಕ

ಶಿವ ಶಿವ ಸಲ್ವುದೇ ಸಮರಮಂತೆನಗದ್ವಯನೊಳ್ ಮಹೇಶನೊಳ್
ಭವಹರನೊಳ್ ಮಹಾನುಹಿಮನೊಳ್ ಜ್ವಲನಾಕ್ಷನೊಳಕ್ಷಯಾಂಗನೊಳ್
ಪ್ರವಿದಿತನಾದಬಿಂದುಕಳೆಯಿಂ ಮಿಗೆ ಮೀಱಿದನೊಳ್ ಶ್ರುತಿಸ್ಮೃತಿ
ಸ್ತವನಕತೀತನೊಳ್ ಜಗದ ಜೀವರನಾಡಿಪ ಸೂತ್ರಧಾರನೊಳ್ ೧೨೩

ಮತ್ತೇಭ

ಕಲಹಂ ತಕ್ಕುದೆ ನೋಟ್ಪಡೆಂತೆನಗೆ ಸಚ್ಚಿದ್ರೂಪನೊಳ್ ನಿತ್ಯನಿ
ರ್ಮಳನೊಳ್ ಪ್ರಾಕೃತಸಾಮರೂಪ ಗುಣಚೇಷ್ಟಾಲಂಬನೊಂದ್ದೋಱದು
ಜ್ಜ್ವಳನೊಳ್ ಸಂಧಣುವಿಂಧಣುಸ್ಥಿತಿ ಮಹತ್ತಿಂಗಂ ಮಹತ್ತಾದ ನಿ
ಶ್ಚಲನೊಳ್ ನಿರ್ಭಯನೊಳ್ ನಿರಸ್ತಜಡತಾಸಂಸರ್ಗನೊಳ್ ಭರ್ಗನೊಳ್ ೧೨೪

---

೧-೧ ಧನುವಿನೊ (ಜ)

ಹರನೊಳ್ಲವನಾಂಪ ಬಗೆಯಿಂ
ಪಿರಿದು ತಪಂಗೆಯ್ದು ಬಟಿಕಮದನಳಿದೀಗಳ್
ಕರಮಜ್ಞತೆಯಿಂ ಪೊಣರ್ದೆಂ
ಹರಚರಣದ್ರೋಹಕೆಂತು ಭಾಜನನಾದೆಂ ೧೨೫

ಮತ್ತೇಭ

ಕ್ಷಿತಿಯೊಳ್ ಕೃಚ್ಛ್ರಮುಖಪ್ರಸಿದ್ಧತಪದಿಂ ಯಾಗಂಗಳಿಂ ತೀರ್ಥಸಂ-
ತತ[1]ಸೇವಾವಿಧಿಯಿಂದೆ ಮಂತ್ರಜಪದಿಂ ದಾನಾದಿಯಿಂ ನಾಡೆ ನಿ-
ಷ್ಕೃತಿ ಶಾಸ್ತ್ರಂಗಳೊಳುಂಟು ದುಸ್ತರಮಹಾಪಾಪಕ್ಕಮಿಲ್ಲಿಲ್ಲ ನಿ-
ಷ್ಕೃತಮೆಂತುಂ ಪರಿಹಾರಮುತ್ಕಟಶಿವದ್ರೋಹಕ್ಕೆ ಶಾಸ್ತ್ರೌಘದೊಳ್ ೧೨೬

ಉತ್ಪಲ

ವನ್ಯಕಿರಾತನೆಂದು ಬಗೆದೆಚ್ಚೆನಿದಿರ್ಚಿದೆನಜ್ಞಭಾವದಿಂ
ಜನ್ಯಮನಾಂತು ನಿಂದು ಮಿಗೆ ಮೆಯ್ಪೊಣರ್ದೆಂ ಮದನುಗ್ರಹಾರ್ಥಮೀ
ಮಾನ್ಯಮಹೇಶ್ವರಂ ಮಱೆಯೊಳಿರ್ದುದುದಂ ತಿಳಿದಾತನಲ್ತು ಸೌ-
ಜನ್ಯವಿದೂರನಾದೆನಕಟೆನ್ನವೊಲಾವನೊ ಗಾಂಪನುರ್ವಿಯೊಳ್ ೧೨೭

ಚಂಪಕ

ಸಕಲ[2]ಸುರೋರಗಾಸುರ[2]ನರರ್ಕಳನಸ್ತ್ರದೆ ಗೆಲ್ವ[3] ಪುಷ್ಪಸಾ-
ಯಕಜಗದೇಕವೀರನ ಮದಂಗಿಡೆ ಮರ್ದಿಸಿದಪ್ರತರ್ಕ್ಯನೊಳ್
ಪ್ರಕಟಕೃತಾಂತಮರ್ದಕನೊಳಲ್ಪಧನುರ್ವಿಶಿಖಂಗಳಿಂ ಜಯೋ-
ತ್ಸುಕತೆಯೊಳೆಚ್ಚು ಗೆಲ್ವ ಬಗೆಯಾಂತೆನಿದೆನ್ನಯ ಮೋಹಮೆಂತುಟೋ ೧೨೮

ಉತ್ಪಲ

ಅಂಗುಟದಿಂ ರಸಾತಳಕೆ ಮೆಟ್ಟಿದನಾ ದಶಕಂಠನಂ ಮಹಾ-
ಸಂಗರದೊಳ್ ವಿಭಂಗಿಸಿದನಾಂತಸುರರ್ಕಳನಾರ್ದು ಸುಟ್ಟನಾ-
ರ್ಪಿಂ ಗಗನಸ್ಥಿತಾಸುರಪುರತ್ರಯಮಂ ಸದೆದಂ ಕೃತಾಂತನಂ
ತುಂಗಪರಾಕ್ರಮಂ ಗಿರಿಶನೀತನೊಳೆಂತುಟೊ ಗೆಲ್ವಳವುಜ್ಜುಗಂ ೧೨೯

ಮಹಾಸ್ರಗ್ಧರೆ

ಮುಳಿದಾಂ ನೋಟ್ಪಂದಮೇ ಕಣ್ಣೆರಡರೊಳೆ ಮಹಾವಿಶ್ವತಶ್ಚಕ್ಷುವಂ ಕೆಯ್-
ಗೊಳಿಸುತ್ತುರ್ಕೆಯ್ಗಳಿಂ ಕಾದುವ ಸಡಗರಮೇ ವಿಶ್ವತೋಬಾಹುವೊಳ್ ಸಾ-
ರ್ದೆಳಸುತ್ತುಂ ಪೋರ್ವ ಬಿಂಕಂ ಪದಯುಗದೊಳಮೇ ವಿಶ್ವತಃಪಾದನೊಳ್ ಸಂ-
ಗಳಿಸಿತ್ತೀ ವಿಶ್ವತೋವಕ್ತ್ರನೊಳೆ ಪುರುಡುವಾಶೆನ್ನದೋ ಮದ್ವಿಮೋಹಂ ೧೩೦

---

೧ ತತಿ (ಚ) ೨-೨ ಸುರಾಸುರೋರಗ (ಯ) ೩ ಗೆಲ್ದ (ಯ) ೪ ಗೆಲ್ಲ (ಕ, ಯ)

ಉತ್ಪಲ

ವ್ರೂದಲೆವಾತುಗಳ್ ಗಡ ಮಹಾನಿಗಮೋಕ್ತಿಗತೀತನೊಳ್ ಜಯೊ
ಹ್ಲಾದದ ಝುಂಕೆಗಳ್ ಗಡ ಜಗತ್ತ್ರಯದುರ್ಜಯನೊಳ್ ಶರೌಘದಿಂ
ಭೇದಿಪ ಬಿನ್ನಣಂ ಗಡ ಜಿತಾಂತಕನೊಳ್ ನಿಮಗೆ ಮುಷ್ಟಿಯುದ್ಧದಿಂ
ಕಾದುವ ಕಜ್ಜಮುಂ ಗಡ ನಿರಂಗನೊಳಿಂತಿದು ಚಿತ್ರಮಲ್ಲವೇ ೧೩೧

ಚಂಪಕ

ಹರ ಹರ ತಾರ್ಕ್ಷ್ಯನೆತ್ತ ಫಣಿಯೆತ್ತ ಮಹಾವನವಹ್ನಿಯೆತ್ತ ಕಾಱ್
ಮುರಮುಮುದೆತ್ತ ವಜ್ರಧರನೆತ್ತ ಧರಾಧರಮೆತ್ತ ಮತ್ತಕೇ
ಸರಿಪತಿಯೆತ್ತ ವನ್ಯಗಜಮೆತ್ತ ಪೊಣರ್ಕೆಗೆವೆಂತು ನಿಲ್ವನೀ
ಪರಿ ಜಗದೇಕದೇವ ಶಿವನೆತ್ತ ಧನಂಜಯನೆತ್ತ ಧಾತ್ರಿಯೊಳ್ ೧೩೨

ಮತ್ತೇಭ

ಭಯಭಕ್ತಿಸ್ಪೃಹೆವೆತ್ತು ನೋಟ್ಪ ನಯನಂ ರೋಷಾರುಣಾವೇಶದು
ರ್ಣಯಕಿಂಬಾಯ್ತು ಪದಾಬ್ಜ ಪೂಜನಕೆ ಪಕ್ಕಾಗಿರ್ದ ಕೆಯ್ ಕೆಯ್ದುವಂ
ರಯದಿಂ ತಾಳ್ದಿದಿರಾಂತುದೀಶ್ವರಮಹಾಮಂತ್ರಕ್ಕೆ ಬೀಡಾದ ಜಿ
ಹ್ವೆಯೆ ಮಾಱುತ್ತರವಾಂತುದುತ್ಕಟ ಮಹಾವ್ಯಾಮೋಹಪೋಗೆಯ್ಯದೊ ೧೩೩

ಉತ್ಪಲ

ಆವಳ ಪಾದಪಂಕಜದಧಸ್ಸ್ಥಳದೊಳ್ ಸಲೆ ಸುಪ್ರತಿಷ್ಠಿತರ್
ಭಾವಿಸೆ ಧಾತೃದೈತ್ಯರಿಪುರುದ್ರಮಹೇಶಸದಾಶಿವರ್ಕಳಾ
ಪಾವನಶಕ್ತಿಯಾವನಡಿಗಾತ್ಮಶಿರಸ್ಕಮನಾನ್ಯೆಗೆಯ್ದುಗಳಾ
ದೇವನೊಳಾಂ ದಿಟಂ ಶಿವ ಶಿವಾ ಮುಳಿಸಿಂ ಸೆಣಸಲ್ ಸಮರ್ಥನೇ ೧೩೪

ಪುಟ್ಟಿದ ಪೊಂದದುಂಟೆನಿಸದಿಲ್ಲೆನಿಸುತ್ತಿರದಿಪ್ಪ ಮಾಯೆಯುಂ
ಮುಟ್ಟದ ಲಿಂಗದೋಸರಿಸದೊಂದಿರ್ದಾತ್ಮರನಾತ್ಮಪಾಶದಿಂ
ಕಟ್ಟುವ ಕಟ್ಟುವಗ್ಗಮನದಂ ಪಱಿದಿಕ್ಕುವ ಮಿಕ್ಕು ತೋರ್ಪನ್ ಕೆ
ಯ್ಗೆಟ್ಟುವ ಮುಟ್ಟೆ ಸಿಲ್ಕದ ಮಹಾತ್ಮನೊಳಿಪ್ಪುದೆ ಮತ್ಪರಾಕ್ರಮಂ ೧೩೫

ಎಂಡಿದಿಂತು ಚಿಂತಿಸುತೆ ಪಲ
ವಂದದೆ ಬಗೆನೊಂದು ಹಮ್ಮದಂಬೋಗಿರೆ ಪಾ
ರ್ಥಂ ದಯೆಯಿಂಧವನಿರ್ದೆಡೆ
ಗೆಂದುಧರಂ ತಳರ್ದು ತಣ್ಪುವೆಱಿದನಾಗಳ್ ೧೩೬

೧ ಗೆಯ್ದು (ಕ) ೨ ಗಟ್ಟುವ (ಯ) ೩ ಬಂ (ತ)

ಚಂಪಕ

ಪೊಗೆಯುಳಿದಗ್ನಿಯಂತೆ ಮುಗಿಲ್ಪೋಡಿದಂ ಭಾಸ್ಕರನಂತೆ ಮಾಯೆ ಮೆಯ್
ದೆಗೆದ ನಿಜಾತ್ಮನಂತೆ ಹೊಱೆ[೧]ಯುರ್ಚಿದ ಕೂರಸಿಯಂತೆ ಕಾಂತಿ ಕೆಯ್-
ಮಿಗೆ ಶಬರಾಂಗಮಂ ತೊಱೆದು ಪೂರ್ವನಿಜಾಕೃತಿವೆತ್ತು ಲಂಪಿನಿಂ
ಸೊಗಯಿಸುತಿರ್ದನಾಗಮಶಿರಂ ಪೊಗೞುತ್ತಿರೆ ಚಂದ್ರಶೇಖರಂ ೧೩೭

ಗದ್ಯ

ಇದು ನಿಖಿಲ[೨]ಭುವನೈಕವಲ್ಲಭಸುರಾಸುರೇಂದ್ರವರದಕರುಣಾವರಣಪರಮಶಿವಲಿಂಗ ತರುಣಪತಂಗಸಂಗತಮಂಗಳಹೃದಯಾರವಿಂದಬಂಧುರ [೩]ಸರಸಸಜ್ಜನ[೩]ಮಾನಿತೋಭಯ ಕವಿತಾವಿಚಕ್ಷಣ[೪] ಶ್ರೀಷಡಕ್ಷರದೇವ ವಿರಚಿತಮಾದ ಕಿರಾತರುದ್ರಲೀಲಾಕಥನವಿಪುಳ ಪ್ರಬಂಧದೊಳ್ ಶಬರಶಂಕರಪಾರ್ಥಯುದ್ಧವರ್ಣನಂ ಚತುರ್ಥಾಶ್ವಾಸಂ ಪರಿಸಮಾಪ್ತಂ.

---

೧ ಲೊಡ್ಡದ (ಗ, ಜ, ತ) ೨ ಸಮಸ್ತ (ಚ, ಜ) ೩-೩ ಸರಸಜನ (ಯ) ೪ ವಿಶಾರದ (ಯ)

ಶ್ರೀಸರ್ವಮಂಗಳಾಮುಖ
ಭಾಸುರಪೂರ್ಣೇಂದುರುಚಿಚಕೋರಂ ವಿಶ್ವಾ
ವಾಸಂ ನಿಗಮಸ್ತುತಸುವಿ
ಲ್ಲಾಸಂ ಮಾಳ್ಕೆಮಗೆ ಸೌಖ್ಯಮಂ ಶಿವಲಿಂಗಂ ೧

ಮಹಾಸ್ರಗ್ಧರೆ

ರವಿಕೋಟಿದ್ಯೋತಮೊತ್ತಂ ತೊಳಗೆ ಶಶಿಕಲಾಸ್ಪರ್ಧಿನೀಜೂಟನಂಗೋ
ದ್ಭವಭಸ್ಮಾಲಿಪ್ತನಕ್ಷಿತ್ರಯಕಲಿತನನಂತಾಹಿ[1]ಭೂಷಂ ಮಹಾಕೃ
ತ್ತಿವಸಾನಂ[2] ಪಂಚವಕ್ತ್ರಂ ದಶಭುಜನಸಿತಗ್ರೀವನೊಲ್ದೊಪ್ಪಿದಂ ಟಂ
ಕವರಾಭೀತಿತ್ರಿಶೂಲಾದ್ಯುಪಲಸಿತಕರಂ ದಿವ್ಯರೂಪಂ ಮಹೇಶಂ

ಎಳವೆಳಕಿನ ಬೆಳ್ವೆಳಗಂ
ಬಟಲ್ಚಿ ಶಶಿರುಚಿಯೊಳೆರಕವಿಟ್ಟಂದದಿನೇಂ
ತೊಳಗಿದುದೊ ಧವಳಕಿರಣೋ
ಜ್ಜ್ವಳಸದ್ಯೋಜಾತವದನಮದು ಪರಶಿವನಾ ೩

ಎಳನೇಸಱ ಬಿಂಬದ ಕೆಂ
ಬೆಳಗಂ[3] ತೆಗೆದ[4]ಲರ್ದ ದಾಸಳದ[5] ಪೊಸಗೆಂಪಂ[6]
ಪಟಿಕೆಯ್ದು ವಾಮದೇವೋ
ಜ್ಜ್ವಳವದನಂ ಸೊಗಯಿಸಿರ್ದುದಗಜಾಧವನಾ[7] ೪

ಭ್ರಮರಾಂಜನಾಭ್ರರುಚಿ ವಿ
ಭ್ರಮಮನ್ನತಿಸ್ಥಿತಕುಟಿಲದಂಷ್ಟ್ರಮನಕ್ಷಿತ್ರಯಸಂ
ಕ್ರಮಿತಂ ಕರಮೆಸೆದುದಘೋ[8]
ರಮುಖಂ ಫಣಿಕುಂಡಲೋಜ್ಜ್ವಲಂ ಪುರಹರನಾ ೫

---

೧ ನಂಗಾಹಿ (ಚ) ೨ ವಿವಾಸಂ (ಚ) ೩ ಬೆಳರಂ (ಗ, ತ) ೪ ತೆಗೆದ (ಚ)
೫ ದಾಸಣದ (ಯ) ೬ ಕೆಂಪಂ (ಕೈಬರೆಹದ ಪ್ರತಿಗಳಲ್ಲಿ) ೭ ವರನಾ (ಚ)
೮ ಸೆದುದು ಘೋ (ಜ).

ಅಲರ್ದ[೧] ಪೊಸಕರ್ಣಿಕಾರದ
ಸುಲಲಿತನವಕನಕಕಂಜಕಿಂಜಲ್ಕದ ಮಂ
ಜುಲರುಚಿಯಂ ಪೞಿದೆಸೆದುದು
ವಿಲಸಿತತ್ಪುರುಷವಕ್ತ್ರಮಹಿಕುಂಡಲನಾ ೬

ಎಳಮುತ್ತಿನ ಶಂಖದ ಬೆ
ಳ್ವೆಳಗಂ ಮುಕ್ಕುಳಿಸಿದಂತೆ ತೊಳತೊಳಗುವ ಸ್ತೈ
ಪ್ಷಳವಡೆ ನಯನತ್ರಯಮುಂ
ಜುಳಮೀಶಾನಾಸ್ಯಮೊಪ್ಪಿದುದು ಶಶಿಧರನಾ ೭

ಮಹಾಸ್ರಗ್ಧರೆ

ಘನತೇಜಂ ರತ್ನಮಾ ರತ್ನದಿಷುಧಿಕಕರಂ ಕಾಂಚನಂ ರತ್ನದಿಂ ಕಾಂ
ಚನದಿಂ ತೀವ್ರಾಂಶುಯುಕ್ತಂ ಸ್ಫಳಚನೆ ಪೊಳೆವೊಳ್ಮಿಂಚುವಾ ರತ್ನದಿಂ ಕಾಂ
ಚನದಿಂದೊಳ್ಮಿಂಚಿನಿಂದಂ ರವಿರುಚಿ ಪಿರಿದೊಪ್ಪಿರ್ಕುಮಾ ರತ್ನದಿಂ ಕಾಂ
ಚನದಿಂದೊಳ್ಮಿಂಚಿನಿಂದಂ ರವಿರುಚಿಯಿನಳುಂಬಂ ಮಹೇಶಪ್ರಕಾಶಂ ೮

ಚಂಪಕ

ತುೞಿಲಳವಾಂತು ನಿಂದ ಮಿಗಬೇರ[೨]ನನಿಕ್ಕಿ ಪೊಣರ್ಕೆಗಾರ್ಪುರ್ ಸಂ
ಗಳಿಸಿದಿರಾಂತ ಪಲ್ಲಮಱಿಕ್ಕಸನಂ ಸೞಿದಣ್ಮಿ ಚುರ್ಚಿ ಬಾಂ
ಬೊಬಿಲನೊಡರ್ಚಿ ನಲ್ಸೊಗಮನಗ್ಗಿಮೊಗರ್ಗೆ ಸಮಂತು ಬೆಳ್ಜಸಂ
ದಳೆದೆಸೆದಿರ್ದ ಬಾನ್ನವಿರನೊಳ್ಪರಿಜಂ ತಳೆದೊಪ್ಪಿ ತೋಱಿದಂ ೯

ಶ್ರುತಿವೀಥಿ[೩] ಮುಗಿದ ಕೆಯ್ಗಳಿ
ನತಿಶಯಮೆನೆ ಪೊಗೞ್ವ ಮಂಗಳಧ್ವನಿ ದಿವಿಜ
ಪ್ರತತಿಯ ಜಯಜಯರುತಿ ಗಣ
ನುತಿನಿನದಂ ದೆಸೆಯನಳುರ್ದದೇಂ ಮುಸುಕಿದುದೋ ೧೦

ಚಂಪಕ

ವಿತತಸುಗಂಧಿ[೪]ಸಾರಸುರಭೀಕೃತದಿಙ್ಮುಖಚಂಚರೀಕಸಂ
ಗತಮಕರಂದಪೂರ್ಣಸುಮನೋಗಣಪಾಣಿವಿಮುಕ್ತಭೂರಿದಿ
ವ್ಯತರುಲತಾಂತವೃಷ್ಟಿ ಸುರಭೇರಿಯ ನಿರ್ಭರನಾದಮುಣ್ಮೆಸ
ನ್ನುತಸುರರಾರ್ದುಘೋಷೆಯೆನೆ ವಿಜೃಂಭಿಸಿ ಸೂಸಿದುದೀಶ್ವರಾಂಘ್ರಿಯೊಳ್ ೧೧

---

೧ ಅಲರ್ದು (ಗ, ತ); ಅಲರ್ವ (ಯ) ೨ ದೇರ (ಯ); ಭೇದ (ಜ) ೩ ಶ್ರುತಿ ವಿತತಿ (ಯ)
೪ ಗಂಧ (ಯ)

ಹರಗಣಮುಂ ಸುರಗಣಮುಂ
ಕಿರಾತವೇಷಮನಗಲ್ದು ದಿವ್ಯಾಭರಣಾಂ
ಬರಗಂಧಮಾಲಿಕಾಬಂ
ಧುರಮೆಸೆದುದು ಮುನ್ನಿನಂತಿರಭವನ ಪೊರೆಯೊಳ್* ೧೨

ಚಂಪಕ

ಉಱಿದು ಪುಳಿಂದಿನೀವಿಹಿತವಿಭ್ರಮಮಂ ಸುರಕಾಮಿನೀಜನಂ
ಬಳಸಿರೆ ತಾನುಮಂತೆ ನಗನಂದನೆ ಹಾರಕಿರೀಟಕುಂಡಲೋ
ಜ್ಜ್ವಳಕಳಕಾಂಚಿ ಕಂಕಣಪದಾಂ^೧^ಗದ ಮುಖ್ಯವಿಭೂಷಣಾಳಿ ಕಣ್
ಗೊಳಿಸಿರೆ ದೇವದೇವನೆಡದೊಳ್ ನೆಲಸಿರ್ದಳುದಾರ^೨^ಶೋಭೆಯಿಂ ೧೩

ಆಗಳ್,

ಚಂಪಕ

ಬೆಮರ್ವ ಕಳೇವರಂ ಸುರಿವ ಸಂತಸಗಣ್ಬನಿ ತಳ್ತ ಕಂಪನಂ
ನಿಮಿರ್ದೆಸೆವಂಗರೋಮತತಿ ಕಣ್ಗೊಳಿಸುತ್ತಿರೆ ತಳ್ವದೆಱ್ದು^೩^ ಸಂ
ಭ್ರಮದ ಪೊದಱ್ಕೆಯಿಂ ಮುದದ ಪೆರ್ಚುಗೆ ಸಂದಣಿಗೊಳ್ವಿನಂ ಪದಾ [೧೪
ಬ್ಜಮನನವದ್ಯೋಪ್ಪೆ ಮೌಳಿ ಮಣಿದಂ ಮಹಿಯಂ ತನು ಸೋಂಕೆ ಪಾಂಡವಂ

ವಚನ

ಅಂತೆಱಗಿ ಸರುಜಂ ಸಂಜೀವನಮಂ ಸವಿದಂತೆ, ಬಡವಂ ಕಡವರಂಗಂಡಂತೆ, ಕಡಲೊಳಾಟ್ವಂ ತೆಪ್ಪಮನಪ್ಪಿದಂತೆ, ಜಾತ್ಯಂಧಂ ಕಣ್ಬಡೆದಂತೆ ನಿರತಿಶಯಸಂಮದ^೪^ಮನೊಳಕೊಂಡು ಕರಾರವಿಂದಂಗಳಂ ಪಣೆಯೊಳಮರ್ಚಿ ನಿಂದು;

ಚಂಪಕ

ಪದತಳದೊಳ್ ತೊಡಂಕಿ ಪರಿದಾಡಿ ಪೊದಱ್ದೆಸೆವಂಗದೇಶದೊಳ್
ಪದೆದುರದಲ್ಲಿ ಸಯ್ಪರಿದು ಮಂಜುಳಕಂಠಮನಪ್ಪಿ ವಕ್ತ್ರ ಪ
ದ್ಮದೊಳೆಡೆಗೊಂಡು ಸುತ್ತಿ ಸುಱಿದಾಡಿ ಬಱಲ್ದು ಸರಿತ್ಸುಧಾಂಶುಗಳ್
ಪುದಿದ ತದೀಯಮೌಳಿಯೊಳೆ ವಿಶ್ರಮಿಸಿರ್ದುದು ದೃಷ್ಟಿ ಪಾರ್ಥನಾ ೧೫

ವಚನ

ಅಂತು ಸಡಗರದಿನವನನಭವನನಭೀಕ್ಷಿಸಿ,

---

೧ ವರಾಂ (ಯ) ೨ ಉದಾತ್ತ (ಚ) ೩ ದೇಳ್ವ (ಯ) ೪ ಸಮ್ಮುದಕ (ಯ)
* ಈ ಪದ್ಯವು 'ಯ' ಪ್ರತಿಯಲ್ಲಿಲ್ಲ; ಬಿಟ್ಟು ಹೋದಂತೆ ತೋರುತ್ತದೆ.

ಚಂಪಕ

ಜಯ ಜಗದೀಶ ದೇವ ಜಯ ಚಿನ್ಮಯರೂಪ ಜಯಾದ್ರಿಜಾಕುಚ
ದ್ವಯಹರಿಚಂದನಾಂಕ ಜಯ ನಿರ್ಜಿತಪಾಶ ಜಯಾಗಮಾಂತಸಂ
ಚಯನುತಪಾದಪದ್ಮ ಜಯ ಭೂಧರಧರ್ಮ ಜಯಾಶ್ರಯಾಶ್ರಸಂ
ಶ್ರಯನಿಜಫಾಲನೇತ್ರ ಜಯ ನಿರ್ಜರಪೂಜ್ಯ ಜಯಾಂತಕಾಂತಕಾ ೧೬

ಉತ್ಪಲ

ಭಕ್ತಕುಟುಂಬಿ ಭಕ್ತಜನವತ್ಸಲ ಭಕ್ತಭವಾದ್ರಿಶಂಬ ಸ
ದ್ಭಕ್ತಸಹಾಯ ಭಕ್ತಸುಖಸಿಂಧುಸುಧಾಕರ ಭಕ್ತಪಾಲನೋ
ದ್ಯುಕ್ತ ನಿರೀಹ ಭಕ್ತಪರಮೋಕ್ಷದ ಭಕ್ತಮನಸ್ಸರೋಜಸಂ
ಸಕ್ತಮರಾಳ ಭಕ್ತಪರಿಷದ್ವಿಪದರ್ಣವಕುಂಭಸಂಭವಾ ೧೭

ಮಹಾಸ್ರಗ್ಧರೆ

ಚಳಚಿತ್ತಂ ಜಾಡ್ಯವೃತ್ತಂ ಚಪಳಮತಿ ಮದಾಂಧಂ ಮಹಾಮೋಹಮೂರ್ಛಾ
ವಿಳಸ್ಪಾಶಾಪಾಶಬದ್ಧಂ ಕುಟಿಲನಧಮನಾದೆನ್ನೊಳಾರಯ್ಯುದೇಂ ನಿ
ರ್ಮಳಭಕ್ತಿಜ್ಞಾನಭಾಸ್ವದ್ಗುಣಗಣಮನುಮಾನಾಥ ಸರ್ವಾಪರಾಧಂ
ಗಳನೀಗಳ್ ತಳ್ವದೆಂತುಂ ಮಱಿ ಪೊರೆ ಪುರುಳಿಲ್ಲಿಲ್ಲವೆನ್ನೊಳ್ ಪುರಾರೀ ೧೮

ಚಂಪಕ

ಅಱಿದಱಿದುಂ ಮತಿಭ್ರಮಿತನಾದ ಮದಾಂಧಕನಾನೆ ಕಂಡು ಕಂ
ಡೆಱಗದ ಖೂಳನಾನೆ ಕುಱಿವಾನಿಸನಾನೆ ಕುಬುದ್ಧಿಯಾನೆ ಕ
ಟ್ಟೆಱಿಕೆಯ ದುಷ್ಟನಾನೆ ಮಱಿ ದೇವ ಮದೀಯಶತಾಪರಾಧಮಂ
ಮೆಱಿ ಕರುಣಾಬ್ಧಿ ನಿನ್ನ ಸುಗುಣೋನ್ನತಿಯಂ ಭುವನೈಕವಲ್ಲಭಾ ೧೯

ಕರುಣಿಸು ಕಾಲಸಂಹರ ಕಲಾಪಕಲಾಧರ ಸಾರಸತ್ಕೃಪಾ
ಕರ ಶರಣಾಗತಾದರ ಸುರಾಹಿತಭೀಕರ ಧೀರವಾರಸಾ
ಗರವಿಲಸತ್ಸುಧಾಕರ ಮಹಾಗುಣಬಂಧುರ ಶೂಲಕೃತ್ತಿ೨ಸಿಂ
ಧುರ ಕನಕಾದ್ರಿಕಂದರವಿರಾಜಿತಮಂದಿರ ಕಾಲಕಂಧರಾ ೨೦

ಉತ್ಪಲ

ದೇವ ಮಹೇಶ ದೇವರಿಪುನಾಶಕ ದೇವ ಗಣೇಶತಾತ ಮ
ದ್ದೇವ ಗಿರೀಶ ದೇವ ಜಿತಪಾಶ೩ಕ ದೇವ ಹುತಾಶಲೋಚನಾ೩
ದೇವ ಸುಭಾವ ದೇವ ೪ಸುಕಳೇವರ ದೇವ ಸು೪ಧರ್ಮಕೋಶ ಸ
ದ್ದೇವ ಮದೀಶ ದೇವ ಗರಳಾಶನೆ ದೇವ ನಗಾತ್ಮಜೇಶ್ವರಾ ೨೧

---

೧ ಪದಾ (ಜ) ೨ ಕೃತ್ತಿ (ಕೈಬರೆಹದ ಪ್ರತಿಗಳಲ್ಲಿ) ೩–೩ ಹುತಾಶಲೋಚನಾಕ್ಷಯಾ (ಚ)
೪–೪ ವರಪಾಂಡುಕಳೇವರ (ಚ)

ಚಂಪಕ

ನಿರುಪಮಮೂರ್ತಿ ನಿರ್ಮಳಿನಮೂರ್ತಿ ನಿರರ್ಗಳಮೂರ್ತಿ ಸತ್ಯಪಾ
ಕರವರಮೂರ್ತಿ ಭದ್ರಮಯಮೂರ್ತಿ ಭವಾಮಯದೂರಮೂರ್ತಿ ಭಾ
ಸ್ಕರರುಚಿಮೂರ್ತಿ ಭಕ್ತಹಿತಮೂರ್ತಿ ಚರಾಚರಮೂರ್ತಿ ಚಂದ್ರಶೇ
ಖರವರಮೂರ್ತಿ ಚಾರುತರಮೂರ್ತಿ ಸುಮೂರ್ತಿಯ ಮೂರ್ತಿ ಶಂಕರಾ ೨೨

ಚಂಪಕ

ಪರಮ ಪರಾದಿರೂಪ ಪರಮಾತ್ಮ ಪರಾನ್ವಿತ ಪಾಶ[೧]ದೂರ ಚಿತ್
ಪರತರತತ್ತ್ವ ಪಾವನ[೨]ಗುಣಾಶ್ರಯ ಪಾಲಿತವಿಶ್ವ ಭಕ್ತತತ್
ಪರಪರಿಪೂರ್ಣ ಪಾವಕವಿಲೋಚನ ಪನ್ನಗಹಾರ ಸತ್ಪರಾತ್
ಪರ ಪರಮೇಶ ಪಾಲಿಸು ಪರಾಪರಮೋಕ್ಷದ ಪಾರ್ವತೀಶ್ವರಾ ೨೩

ನಿರಘ ನಿರೀಹ ನಿರ್ಭಯ ನಿರಾಶ್ರಯ ನಿಶ್ಚಲ ನಿತ್ಯ ನಿರ್ಮಲಾ
ಚರಣ ನಿರಂತ ನಿರ್ಭವ ನಿರಾಮಯ ನಿರ್ಗುಣ ನಿಸ್ತುಳಪ್ರಭಾ
ವರಣ ನಿರಂಗ ನಿರ್ಮದ[೩] ನಿರಾಕುಲ ನಿಷ್ಫಲ ನೀಲಕಂಠ ನಿ
ರ್ಜರನತ ನಿಷ್ಕಳಂಕ[೪] ಜಯಶಂಕರ ನಿರ್ಜಡ[೫] ಶಾಂಭವೀಧವಾ ೨೪

ಉತ್ಪಲ

ವ್ಯೋಮಕಚಾಭಿರಾಮ ತತಸಾಮ ಸುಧಾಮ ಸುರಾಮ ಸಜ್ಜನ
ಪ್ರೇಮ ನಿರಾಮಯಾಂಗ ಪರಭೀಮ ಸುನಾಮ ನಿಕಾಮ ನಿರ್ಜರ
ಸ್ತೋಮಲಲಾಮ ಹೇಮನಗಧಾಮ ಜಗತ್ರ್ಯಯಸಾರ್ವಭೌಮ ಸು
ತ್ರಾಮಮುಖಾಮರಾರ್ಚ್ಯ ಜಿತಕಾಮ ಸದಾ[೬]ಮಳ ಸೋಮಭೂಷಣಾ ೨೫

ತುಂಗತರಂಗಗಾಂಗಜಲಸಂಗ ಕುರಂಗಧರೋತ್ತಮಾಂಗ ನಿ
ರ್ಭಂಗ ನಿರಂಗ ರುಗ್ಜಿತಪತಂಗ ಸುಧಾಂಗ ಸುಮಂಗಳಾಂಗ ಸ
ಲ್ಲಿಂಗನಿಜಾಂಗ ಪುಂಗವತುರಂಗ[೭] ಭುಜಂಗವಿಭೂಷ ಮರ್ದಿತಾ
ನಂಗ ವಿಹಂಗರಾಜರಥದತ್ತರಥಾಂಗ ಚಿದಂಗನಾಪ್ರಿಯಾ ೨೬

ಚಂಪಕ

ಭೃತನಗಧರ್ಮ ಧರ್ಮಪರಿಪಾಲ ಕಪಾಲಕರೇಶ ರೇಶಸಂ
ಗತ ಗತಕಾಮ ಕಾಮದ ಕಲಾಪಕಲಾಪ ಸಮಸ್ತಮಸ್ತಕ
ಸ್ಥಿತಪದಸಾರಸಾರಸ[೮] ಕುಮಾರಕುಮಾರ ಸದಾನ ದಾನವಾ
ಹಿತಹಿತ ದೇವದೇವ ಜಯ ವಾಗ್ವರ ವಾಗ್ವರವಂದ್ಯ ಶಂಕರಾ ೨೭

---

೧ ನಾಶ (ಯು) ೨ ಪಾಲನ (ಕ, ಜ) ೩ ನಿರ್ಮಲ (ಚ); ನಿಶ್ಚಲ (ಯು) ೪ ಳಾಂಕ (ಗ, ತ)
೫ ನಿರ್ಜರ (ಯು) ೬ ಸುಧಾ (ಗ, ತ) ೭ ಕುರಂಗ (ಚ) ೮ ಸು (ಗ, ಚ, ತ).

ಶಿವ ಭವಗಿ ಭೀಮ ಕಾಮಮದಮರ್ದಿ ಕಪರ್ದಿ ನಿತಾಂತಶಾಂತ ದಿ
ವ್ಯವರದ ಭವ್ಯಸೇವ್ಯ ಪದಕಿಂಕರಶಂಕರ ಶಂಭು ಶಾಂಭವೀ
ಧವ ಭುವನೇಶ ಪಾಶಹರ ಚಿದ್ಗುಣ ಸದ್ಗುಣನಾಥಯೂಥಬಾಂ
ಧವ ಧವಳಾಂಗಸಂಗತ ಕೃಪಾಕರ ಭೀಕರ ಕಾಲಸಂಹರಾ ೨೮

ಚಂಪಕ

ಪುರಹರ ಪೂರ್ಣ ಪುಷ್ಕರಸರಿದ್ಧರ ವಾರ್ಧರವಾಹವಂದ್ಯ ವಾ
ಸರಕರಕೋಟಿತೇಜ ವಲಯೀಕೃತಪನ್ನಗರಾಜ ರಾಜಭಾ
ಸ್ವರಶಿಖಿನೇತ್ರ ವಿದ್ರುಮಲತಾಭಜಟಾಧರ ಚಾರುಚಂದ್ರಶೇ
ಖರ ಶರಣಾಗು ಶಾಶ್ವತ ಮಹೀಧರಮಂದಿರ ಮಂಗಳಾಕರಾ ೨೯

ಸ್ರಗ್ಧರೆ

ಸರ್ವಾಂತರ್ಯಾಮಿ ಸರ್ವಾತ್ಮಕನಧಿಗತಸರ್ವಾರ್ಥನಾದ್ಯಂತಶೂನ್ಯಂ
ಸರ್ವಜ್ಞಂ ಸರ್ವತತ್ತ್ವಾಧಿಕನನುಪಮಿತಾಖಂಡಿತೈಶ್ವರ್ಯಪೂರ್ಣಂ
ಸರ್ವಾಧಾರಂ ಸ್ವತಂತ್ರಂ ಸಗುಣನಗುಣನಾತ್ಮೇಶ್ವರಂ ನಿತ್ಯತೃಪ್ತಂ
ಸರ್ವೇಶಂ ದೇವ ನೀನೊರ್ವನೆ ವಿಮಲಪರಂಜ್ಯೋತಿ ಸತ್ಯಂ ಕಪರ್ದೀ ೩೦

ಸದ್ಯೋಜಾತಾದಿಪಂಚಾನನದೆ ಪಡೆ[2]ದು ಮಹ್ಯಾದಿಭೂತಂಗಳಂ ತ
ಳ್ತುದ್ಯೋಗಂಬೆತ್ತು ಪಂಚೀಕರಿಸಿ ಬೆರಸುತಜ್ಜುಯ್ಯು ಭೂತಂಗಳಿಂದಂ
ಪ್ರದ್ಯೋತಾತ್ಮಾಂಗಮಂ ಮುನ್ನೆರೆಪಿ ನೆಗಟ್ಟು ತದ್ಯೋಗಮಂ ಚೇತನಾಂತ
ಶ್ಚಿದ್ವ್ಯಕ್ತಂ ಗುಪ್ತಿಯಿಂ ಪ್ರೇರಕನೆನಿಸಿದಪಯ್ ಸೂಕ್ಷ್ಮರೂಪಿಂ ಮಹೇಶಾ ೩೧

ಮತ್ತೇಭ

ಭವವಾರಾಶಿವಹಿತ್ರಮಲ್ತೆ ಭವದೀಯಂ ದಿವ್ಯನಾಮಂ ಕೃಪಾ
ರ್ಣವ ಮಾಯಾಮಯಮರ್ದನೌಷಧಮದಲ್ ಭವ್ಯರ್ಗೆ ನಿನ್ನೀ ಗುಣ
ಸ್ತವಮೆಂತುಂ ಭವದಂಘ್ರಿಚಿಂತನಮೆ ಕೇಳ್ ಕೈವಲ್ಯಲಕ್ಷ್ಮೀಸುಖೋ
ತ್ಸವಮಂ ಸಾರ್ಚುವ ದೂತಿ ನಿಕ್ಕುವ[3]ವಿದಕ್ಕುಂ ಧಾತ್ರಿಯೊಳ್ ಶಂಕರಾ ೩೨

ಮಹಾಸ್ರಗ್ಧರೆ

ಶ್ರುತಿಭಾವಾವಾಮಸೀಮಂತಮಣಿ ಮುನಿಮನೋಗೇಹಮಧ್ಯಪ್ರಭಾಸಂ
ಗತದೀಪಂ ಮುಕ್ತಿಕಾಂತಾಕರತಳಮುಕುರಂ ಕಾಲಘೋರಾಹಿಗಾರು
ತ್ಮತರತ್ನಂ ಭಕ್ತಚೇತೋವಿಮಳತರ[4]ಸರಃಕಂಜಮಜ್ಞಾನಸಾಂದ್ರಾಂ
ಧತಮಃಪ್ರಧ್ವಂಸಚಂಡದ್ಯುತಿ ಗಡ ಭವದೀಯಾಂಘ್ರಿಪದ್ಮಂ ತ್ರಿಣೇತ್ರಾ[5] ೩೩

---

೧ ಭವ (ಚ) ೨ ಪಡೆ (ಯು) ೩ ಲಕ್ಷಣ (ಕ) ೪ ವಿಮಲತರವಿ (ಚ) ೫ ತ್ರಿನೇತ್ರಂ (ಕ, ಚ, ಜ)

ಮತ್ತೇಭ

ಕ್ಷಿತಿವಾರ್ಯಗ್ನಿಸಮೀರಪುಷ್ಕರರವೀಂದ್ವಾತ್ಮರ್ಕಳೆಂದೆಂಬ ವಿ
ಶ್ರುತಮೂರ್ತ್ಯಷ್ಟಕವಾಂತು ವಿಶ್ವಮಯತಾಸಂಪತ್ತಿಯುಂ ತಾಳ್ದು ಭೂ
ರಿತಮಸ್ಸತ್ತ್ವರಜೋಗುಣಂಬಿಡಿದು ತತ್ತತ್ಕಾರ್ಯಮಂ ಮಾಡುತುಂ
ಸತತಂ ನಿರ್ಗುಣನಿರ್ವಿಕಾರನೆನಿಪಯ್ ಶ್ರೀಶೈಲಜಾವಲ್ಲಭಾ ೩೪

ಮಹಾಸ್ರಗ್ಧರೆ

ಸಕಲಾಧಿಷ್ಠಾತೃ ನೀನೇ ಪ್ರಕೃತಿಮಹದಹಂಕಾರಮುಂ ನೀನೆ ನಿತ್ಯಂ[೧]
ಸಕಲಾತ್ಮಂ ಸೂತ್ರವೈಶ್ವಾನರರಧಿಗತವಿಶ್ವಾತ್ಮನುಂ ತೈಜಸಂ ಪ್ರಾ
ಜ್ಞಕನಾದಂ ನೀನೆ ದೇಹೇಂದ್ರಿಯಮಸುಕರಣಂ ಭೂತಮುಂ ನೀನೆ ತತ್ಸಾ
ಕ್ಷಿಕಸಾಕ್ಷಾದ್ಬ್ರಹ್ಮಮುಂ ಸರ್ವಮುಮೆಲೆ ಪೆಱರಾರ್[೨] ನೀನೆ ವಿಶ್ವಾಧಿನಾಥಾ ೩೫

ವಚನ

ಎಂದು ಪರಮೋತ್ಸವದಿಂ ಸನ್ನುತಿಗೆಯ್ದು ಮತ್ತಮಿರದೆ,

ಮತ್ತೇಭ

ಅತಿಕೋಪಾತುರನಾಗಿ ಮಾಳ್ಪ ತಪಮಂ ನೀಗಾಡಿ ಮುಂಬಿಟ್ಟ ಸ
ಕ್ಷತಕಾಯೋಗ್ರವರಾಹಮಂ ಸದೆದದಂ ಕೊಳ್ವಾಸೆಯಿಂದಜ್ಞತಾ
ಸ್ಥಿತಿವೆತ್ತೆಚ್ಚ ಶರಂಗಳಿಂ ಪೊಣರ್ದೆನ್ನಿಂ ದ್ರೋಹಿಯಾವಂ ಜಗತ್
ಪತಿ ನಿನ್ನಿಂ ಪೆಱನಾವನೀ ಭುವನದೊಳ್ ದೇವಂ ಕ್ಷಮಾಸಂಯುತಂ ೩೬

ವಚನ

ಎಂದು ದೈನ್ಯಂದೋಱಿ [೩]ಭಕ್ತಿಭರದಿಂ[೩] ಮುಗುಳ್ದುಂ ದಂಡಪ್ರಣಾಮಂಗೆಯ್ದು ಪದಯುಗಮಂ ತೆಗೆದು ಬಿಗಿದಪ್ಪಿ ನೆತ್ತಿಯೊಳ್ ಪೊತ್ತು,

ಚಂಪಕ

ಮಣಿವ ಮರಲ್ದು ನೋಡುವ ಕಡಂಗುವ ಪೊಂಗುವ ಸುತ್ತಿ ಬರ್ಪೞಿಂ
ಗಣಗುಣಿಷಾರ್ದುೞ[೪] ಸಾರ್ದುೞ[೫] ನಲವೆರ್ಚುವ ತೂಗುವ ಬೀಗಪಟ್ಟು ಸಂ
ದಣಿಗೊಳೆ ಪಾಡುಪಾಡುವ ಕರಂ ನುತಿಗೆಯ್ವ ಪದಾಬ್ಜಪೂಜೆಯಂ
ತಣಿಯದೆ ಮಾಳ್ಪ ಸಂಭ್ರಮಮದೇಂ ಬಗೆಗೊಂಡುದೊ ಪಾಂಡುಪುತ್ರನಾ ೩೭

ಹರಿವಿಧಿಮನುಮುನಿನಿಗಮೋ
ತ್ಕರಂ ಕರಂ ಕಾಣದರಸುವೀ ನಿನ್ನ ಪದಾಂ
ಬುರುಹದ್ವಯಮಂ ಕಂಡೆಂ
ಹರ ಹರ[೬] ನೆಱೆ ಧನ್ಯನಾವನೆನ್ನಿಂದನ್ಯಂ[೬] ೩೮

---

೧ ಸತ್ಯಂ (ವ) ೨ ತಾರ್ (ಕ) ೩-೩ ಭಯಭಕ್ತಿ ಭಾರದಿಂ (ಯ) ೪ ದಾರ್ದುೞ (ಜ); ವಾರ್ವೞ (ಯ) ೫ ಸಾರ್ವೞ (ಯು) ೬-೬ ನೆರೆದನ್ಯನಾವನೆನ್ನಿಂ ಧನ್ಯಂ (ಗ).

ಪುಟ್ಟೆಂದು ಸಫಲಮಾದುದು
ನೆಟ್ಟನೆ ಮದ್ವಂಶಕುಸುಮಮುಲದುರ್ದು ಪೆಱತೇಂ
ಮುಟ್ಟಿದೆನತಿಶಯಪದವಿಯ
ಬಟ್ಟೆಯನೆಲೆ ದೇವದೇವ ನೀನೊಲ್ದುದಱಿಂ ೩೯

ವಚನ

ಎಂದು ಮತ್ತಮಿಂತು ಕೃತಾರ್ಥತೆಯಂ ತಾಳ್ದು ಸನ್ನುತಿಗೆಯ್ವ ಪಾರ್ಥನ ಸಮುನ್ನತಭಕ್ತಿಭಾವಕ್ಕೆ ಭವಾನೀರಮಣಂ ಮೆಚ್ಚಿ ಮನದಂದು,

ಚಂಪಕ

ಪದೆದುಮರ್ದಪ್ಪಿದಂ ಗುಹಗಜಾಸ್ಯರನಪ್ಪುವ ತೋಳ್ಗಳಿಂದೆ ಮಾ
ಣದೆ ನರನಂ ಮೃಡಂ ಪರಸಿದಂ ನಿಗಮಂಗಳ ಪೆತ್ತ ಬಾಯ್ಗಳಿಂ
ಮುದದೊಲವೆಂತೆ ಮೆಯ್ದಡವಿದಂ ವರವೀವ ಕರಾಬ್ಜದಿಂದೆ ನೋ
ಡಿದನಖಿಳಾಘಮಂ ತೆಮರ್ವ ಕಣ್ಗಳಿನಾ ನರನೇಂ ಕೃತಾರ್ಥನೋ ೪೦

ವಚನ

ಅಂತು[೧] ಮನ್ನಿಸಿ ಮತ್ತಮಿರದೆ,

ಉತ್ಪಲ

ನಿನ್ನ ಕಟೂಕ್ತಿ ಮಂತ್ರನಿನಗೆಚ್ಚ ಶರಾವಳಿ ಪುಷ್ಪಸಂಚಯಂ
ನಿನ್ನ ಸರೋಷವೀಕ್ಷಣದ ದೀಧಿತಿ ದೀಪಿಕೆಯರ್ಚನೋಚಿತಂ
ನಿನ್ನ ಧನುರ್ಲತಾಹತಿಯ ಬಾಸುಳಿ ಪೂಗಳ ಮಾಲೆಯೊಚ್ಚತಂ
ನಿನ್ನಯ ಮುಷ್ಟಿಯುದ್ಧಮೆದು ಮತ್ಪದಪೂಜೆ ನಿಜಂ ಧನಂಜಯಾ ೪೧

ವಚನ

ಎಂದು ಕೃಪಾಪಾಂಗದಿನೀಕ್ಷಿಸಿ,

ಇಂದು ನಿನ್ನ ವರಶರಾಸನ
ಮಿದು ಶರಮಿದು ಖಡ್ಗಮಿಂತಿದಂ ಪಿಡಿಯೆಂದಾ
ಮದನರಿಪುವಿತ್ತು ಮುಂಕೊಂ
ಡುದನಾವುದು ನಿನ್ನಭೀಷ್ಟವದನೊರೆ[೨]ಯೆಂದಂ ೪೨

ವಚನ

ಎಂದು ಮತ್ತಮಿರದೆ,

---

೧ ಎಂದು (ಗ), ೨ ನೆರೆ (ಯ).

ನರನಲ್ತೆ ಪೂರ್ವದೊಳ್ ನೀಂ
ಪರಮರ್ಷಿ[೧]ಮುಕುಂದನಂಶಸಂಭವನೆಂದುಂ
ಕರಮೆನ್ನ ಭಕ್ತನೆಂತಱಂ
ನೆರೆದುದನೆಲೆ ನಿನಗೆ ಕುಡುವುದೆನಗಿದು ಪಿರಿದೇ ೪೩

ವಚನ

ಎನೆ ಮಹೋತ್ಸವಂದಳೆದು ಕೆಯ್ದಾವರೆಗಳಂ ಮುಗಿದು,

ಕರುಣಿಪುದೆನಗೆಲೆ ಕರುಣಾ
ಕರ ಪಾಶುಪತಾಸ್ತ್ರಮಂ ಮಹಾಬ್ರಹ್ಮಶಿರಃ
ಶರಮಂ ಸಮಸ್ತರಿಪುಸಂ
ಹರಮಂ ದಯೆಯಿಂದೆನುತ್ತೆ ಬೇಡುತ್ತಾಗಳ್ ೪೪

ಮತ್ತೇಭ

ಸರದೊಳ್ ಮಿಂದೆಸಗುತ್ತುಮಾಚಮನಮಂ ಸದ್ಭಕ್ತಿಯಿಂ ಪಾದಪಂ
ಕರುಹಕ್ಕೊಲ್ದೆಱಗಿರ್ದ ಗಾಂಡಿವಿಗೆ ತತ್ತನ್ಮಂತ್ರಪೂರ್ವಂ ಕೃಪಾ
ಭರಿತಂ ಬ್ರಹ್ಮಶಿರೋಸ್ತ್ರಮುಂ ಕರುಣಿಸುತ್ತುಂ ಮತ್ತಮುತ್ತಂ ಗುಣಾ
ಭರಣಂ ಪಾಶುಪತಾಸ್ತ್ರಮುಂ ಪದೆಪಿನಿಂ ಕೊಂಡಾಡೆ ದೇವವ್ರಜಂ ೪೫

ಒರೆದೇಕಾಂತದೊಳೊಲ್ಪಿನಿಂದೆ ನಿಜಭಾಸ್ವತ್ತತ್ತ್ವಮಂ ಮೋಕ್ಷದೊಂ
ದಿರವಂ ನಿನ್ನ ಸಮಸ್ತಕಾರ್ಯಕೆ ಸಹಾಯಂ ಮಾಣದೆನ್ನಂಶಮಾ
ದರವಿಂದಾಂಬಕನಂತಱಂ ನಿನಗೆ ಕುಂದೆಂದುಂ ವಲಂ ತೋಱದಾಂ
ತರಿಯುಂ ಗೆಲ್ದಪೆ ಸೌಖ್ಯಮಕ್ಕುಮೆನುತುಂ ಪೇಳ್ದಂ ಭವಾನೀಧವಂ ೪೬

ವಚನ

ಅಗಳ್ ನಿಜೇಪ್ಸಿತಲಾಭಪ್ರಮುದಿತಾಂತಃಕರಣಂ ಪುರಂದರನಂದನಂ ಪುರಹರನ ಪೊರೆಯೊಳೆಸೆವ ಕರುಣಾರಸಭರಿತೆಯಂ ಗಿರಿತನುಜೆಯಂ ಕಂಡು ಸಾಷ್ಟಾಂಗವೆಱಗಿ ನಿಂದು ಕರಾಂಜಲಿವೆರಸು[೨]

ಉತ್ಪಲ

ಮಾತೆ ಮಹೀಧ್ರಜಾತೆ ಜಗದಂಬಿಕೆ ಜನ್ಮವಿಧೂರೆ ಶಂಭುಸಂ
ಪ್ರೀತೆ ಸದಾಪುನೀತೆ ಶಶಲಕ್ಷ್ಮಕಳಾಧರೆ ಸರ್ವಲೋಕವಿ
ಖ್ಯಾತೆ ಕೃಪಾಸಮೇತೆ ಕರಖಡ್ಗನಿಕೃತ್ತಮದಾಂಧದೈತ್ಯಸಂ
ಘಾತೆ ಭೃತಾಂಗಜಾತೆ ಶರಣಾಗಮರಾರ್ಚಿತಪಾದಪಂಕಜೇ ೪೭

---

೧ ಪರಮುಋಷಿ (ಕ, ಜ) ೨ ನೆರಪಿ (ಯ)

ಮಹಾಸ್ರಗ್ಧರೆ

ತರುಣಾದಿತ್ಯಪ್ರಭಾಭಾಸುರೆ ಭವಹರೆ ಭದ್ರಾಂಗಿ ಭಕ್ತೌಘರಕ್ಷಾ
ಕರೆ ಕಾರುಣ್ಯಾರ್ದ್ರನೇತ್ರಾಂಚಲೆ ಕಲಿಕಲುಷಧ್ವಾಂತವಿಧ್ವಂಸಸಾಮೋ
ತ್ಕರೆ ವಿಶ್ವಾರಾಧ್ಯೆ ವಿದ್ಯಾಮಯಿ ವಿವಿಧಮಹಾಭೂತಿಸಂಯುಕ್ತೆ ವಿಶ್ವಂ
ಭರೆ ವೇದಸ್ತುತ್ಯಲೀಲಾಧರೆ ಪೊರೆ ಸತತಂ ಸತ್ಯವಾಣೀ ಮೃಡಾಣೀ ೪೮

ಚಂಪಕ

ಕಮಲಭವಾಂಡಕೋಟಿಗಳನೇಕನಿಜಾಂಶ೧ದೆ ಪೆತ್ತು ಮೋಹವಂ
ಪ್ರಮುದದಿನೋವಿ ಚಿದ್ಗಗನರೂಪದಿನಾಂತರಬಾಹ್ಯದೊಳ್ ಸಮ
ಕ್ರಮಿಸಿ ಮುಸುಂಕಿ ಸಂಹರಿಸುತಂತ್ಯದೊಳದ್ವಯಮಾದ ಬೊಮ್ಮದೊಳ್
ಸಮರಸವಾಳ್ದ ನಿನ್ನಿರವನಾರ್ ಸಲೆ ಪೇಳ್ವರೊ೨ ಸರ್ವಮಂಗಳೇ ೪೯

ವಚನ

ಎಂದು ಸಂದಣಿಪಾನಂದದಿಂ ಸನ್ನುತಿಗೆಯ್ವ ಕರ್ಣರಿಪುವನಪರ್ಣೆ ಪೂರ್ಣ ಕೃಪೆಯಿನಭೀಕ್ಷಿಸಿ,

ಉತ್ಪಲ

ಬಾರೆಲೆ ಪದ್ಮಲೋಚನನ ಮಯ್ದುನ ಪಾಂಡವ ನಿನ್ನ ಭಕ್ತಿವಿ
ಸ್ತಾರಮಿದತ್ತು ದೆನ್ನ ಬಗೆಗುತ್ಸವಮಂ ಪಿಡಿ ಕೊಟ್ಟಪೆಂ ಭವದ್
ವೈರಿನಿಕಾಯಮಂ ಕ್ಷಣದೊಳೆರ್ದೆಪ ಬಾಣಮನೆಂದು ಸದ್ಗುಣಾ
ಧಾರೆ ಧರಾಧರೇಂದ್ರಸುತೆಯಿತ್ತಳುದಾರತರಾಂಜನಾಸ್ತ್ರಮಂ ೫೦

ಚಂಪಕ

ಮೊದಲೊಳದೊಂದು ಪತ್ತು ತುಡುವಲ್ಲಿ ಶತಂ ಬಿಡುವಲ್ಲಿ ಸಾಸಿರಂ೩
ಪದಮಿಡುವಲ್ಲಿ ವೈರಿಶರಸಂಹತಿಯಂ ತಱಿವಲ್ಲಿ ಲಕ್ಷಮ
ಗ್ಗದ ಗತಿಯಲ್ಲಿ ಕೋಟಿ ಸಮರಾಂಕಣದೊಳ್ ಗಣನಾವಿಹೀನಮ
ಪ್ಪುದು ರಿಪುವೃಂದಮಂ ತವಿಸಿ ನಿನ್ನೆಡೆಗೆಯ್ದುಗುಮೀ ಮಹಾಶರಂ ೫೧

ಎಂದೊರೆದು ಕರುಣಿಸುತೆ ಗಿರಿ
ನಂದನೆ ಭುವನೈಕಮಾತೆ ಜಯಮಂ ಪಡೆ ನೀಂ
ಕಂದ ಸಮರಾಂಗಣದೊಳೆನು
ತಂದಮರರ್ ಪೊಗಟೆ ಪರಸಿದಳ್ ಗಾಂಡಿವಿಯಂ ೫೨

---

೧ ಜಾಂಗ (ಚ) ೨-೨ ನಾನರಿವರ್ ಸಲೆ (ಯ) ೩ ಸಾವಿರಂ (ಚ)

ಉತ್ಪಲ

ಅಂಬರದೊಳ್ ಜಯಧ್ವನಿ ವಿಜೃಂಭಿಸಿದತ್ತು ಪೊದಟ್ಟು ಘೆಯ್ಯುಘೇ
ಯೆಂಬ ರವಂ ಸುರಪ್ರಕರದೊಳ್ ನೆಗಟ್ಟಿತ್ತು ಮಹಾನಕಸ್ವನಾ
ಡಂಬರವೊಪ್ಪೆ ಸೂಸಿದುದು ಪೂಮಱಿ ಶಂಕರನಂಘ್ರಿಯೊಳ್ ಸಹ
ಸ್ರಾಂಬಕಸೂನುಗಾದುದು ಮನೋರಥಸಿದ್ಧಿ ಭವಂ ಮಹೋತ್ಸವಂ ೫೩

ಮತ್ತೇಭ

ಶಿವಪಾದಾಬ್ಜದ ಸೋಂಕಿನಿಂ ವಿಮಳತೇಜಃಸ್ಫೂರ್ತಿ ಮೆಯ್ವೆರ್ಚೆ ಪೊ
ಣ್ಮಿಮ ಮಂದಸ್ಮಿತಸಾಂದ್ರಚಂದ್ರಿಕೆ ಪೊದಟ್ಟಾಸ್ಯೇಂದು ಕಣ್ಗೊಪ್ಪೆ ಕಾಂ
ತಿವಿಶೇಷಸ್ಫುಟಫುಲ್ಲಲೋಚನಯುಗಂ ಚೆಲ್ವಾಗೆ ಸೌಂದರ್ಯ ಸಾ
ರವಿರಾಜತ್ತನು ಗಾಡಿವೆತ್ತು ಮೆಱೆದಂ ಗಾಂಡೀವಚಾಪಾಯುಧಂ ೫೪

ವಚನ

ಅಂತೆಸೆದಿರ್ಪಿನಮಾಗಳ್,

ಮತ್ತೇಭ

ಸುರಲೋಕಕ್ಕಿರಥೆಯ್ದಿ ನಿರ್ಜರವರಂಗಾನಂದಮಂ ಸಾರ್ಚಿ ಸಾ
ದರವುಲ್ಲಿಂ ಬಱಿಕೆಯ್ದಿ ಧರ್ಮತನಯಂ ಮುಂತಾದ ಭಾಸ್ವತ್ಸಹೋ
ದರರೊಳ್ ನೀಂ ಬೆರೆದಾಂತ ವೈರಿಗಳನೆಮ್ಮೀ ಬಾಣದಿಂ ಗೆಲ್ದು ಭಾ
ಸುರಸಾಮ್ರಾಜ್ಯಮನಾಳ್ವುದೆಂದು ಗಿರಿಶಂ ಬೀಱಿಟ್ಟನಾ ಪಾರ್ಥನಂ ೫೫

ವಚನ

ಅಂತು ಬೀಱಿಟ್ಕೊಡಲೊಡನೆ ಮೃಡನಡಿಗಳ್ಗೆ ಪೊಡವಿಯೊಡಲೊರಸೆ ಪೊಡೆ ಮಟ್ಟು, ಮೃಡಾಣಿಗೋರಂತೆಱಗಿ, ಗುಹಗಣಪಾದಿಗಳ್ಗೆ ಮಣಿದು, ಗಣವರರ್ಗೆ ಕುಂಬಿಟ್ಟು, ದಿವಿಜೇಂದ್ರರಂ ಬಲವಂದು, ವಿನಯವಿನಮಿತನಾಗಿ ತತ್ಕಾರುಣ್ಯಂ ಬಡೆದು;

ಉತ್ಪಲ

ಜಾನಿಸುತಾದ್ರಿಜಾಪತಿಯ ಪಾದಪಯೋಜಮನೆತ್ತಲೆಯ್ದಿದಂ
ಭೂನುತಶೌರ್ಯನರ್ಜುನನವಂ ಪ್ರಮಥಾಮರರೊಂದುಗೂಡಿ ದಿ
ವ್ಯಾನಕರಾವಮುಣ್ಮೆ ವೃಷಭೇಂದ್ರನನೇಱಿ ನಿಜಾಂಗಕಾಂತಿಯಿಂ
ಭಾನುಕರೋತ್ಕರಂ ಮಸುಳೆ ಬಾನ್ಗಡರ್ದೆಯ್ದಿದನೆತ್ತಲೀಶ್ವರಂ ೫೬

ರಂಭೆಯು ಲಾಸ್ಯಮಿಂಬುವಡೆದೊಪ್ಪಿರೆ ಮುಂಗಡೆಯೊಳ್ ವೃಷಧ್ವಜಂ
ಕುಂಭಿನಿ ನೋಟ್ಪಿನಂ ಮಿಳಿರೆ ಕೀರ್ತಿಸುತೆತ್ತಿರೆ ಚಂಡಕೀರ್ತಿ ಸಂ
ರಂಭದೆ ವಾಣಿಯುಂ ರಮೆಯುಮಿರ್ದೆಸೆ ಢಾಳಿಸೆ ಚಾಮರಂಗಳಂ
ಶಾಂಭವಿ ಜೆನ್ನನೆತ್ತಿರೆ ವಿಲಾಸದೆ ಬಂದನಹೀಂದ್ರಭೂಷಣಂ ೫೭

ವಚನ

ಅಂತೆಲ್ಲಿಂದು ಪರಮಸಂಭ್ರಮದಿನಗಣಿತಮಣಿಗಣಗ್ರಥಿತ ಮುಕುರಮಕರ ತೋರಣದಿನೋರಣಂಬಡೆದೆತ್ತಿದ ಕನಕಕೇತನಂಗಳಿಂ ಕತ್ತುರಿಯ ಸಾರಣೆಯಿಂ ಕುಂಕುಮದ ಕಾರಣೆಯಿಂ ಬಿಡುಮುತ್ತಿನ ರಂಗವಲ್ಲಿಗಳಿಂ ಕೆದರ್ದ ಸುರಕುಜದಲರ ಪೂವಲಿಗಳಿಂ ಸಿಂಗರಂಬೆತ್ತ ರಾಜವೀಥಿಗಳಿಂ ಮಂಗಳತರಮಾಗಿ ಕಣ್ಗೊಳಿಪ ನಿಜ ರಾಜಧಾನಿಯೆನಿಪ ಕೈಲಾಸ[೧]ಪುರವರಮಂ[೧] ಪೊಕ್ಕು, ರತಿ ಪಲರೂಪಾಂತಂತೆಸೆವ ಸುರಸುದತಿಯರ್ ಕಳಸಕನ್ನಡಿವಿಡಿದಿದಿರೆಲ್ತಿರೆ ಮನ್ನಣೆಯ ರುದ್ರಕನ್ಯೆಯರ್ ಶುಭರವದಿಂ ಪೊಂಬರಿಯ[೨]ಣಂಗಳಂ ಪಿಡಿದು ತೊಳತೊಳಪ ರನ್ನದಾರತಿಗಳಂ ಬೆಳಗೆಯುಂ ಮುರಾಂತಕಂ ಮುಂಬರಿದು ಕೆಯ್ಗುಡೆ ವೃಷಭೇಂದ್ರನಿಂದವತರಿಸಿ, ಕುಬೇರಂ ಸಾರ್ಚಿದ ರನ್ನವಾವುಗೆಯಂ ಮೆಟ್ಟಿ, ತೊಟ್ಟನೆ ಕಟ್ಟಿದಿರೊಳ್ ಜಯರವ ಮುಖರಮುಖಂ ಚತುರ್ಮುಖಂ ನಿಜಕೀರ್ತಿಯನುಗ್ಘಡಿಸಿ ಪೊಗಳ್ತೆ ಸಡಗರಂ ಮಿಗೆ ಮಡದಿಯೊಡನೆಲ್ಲಿಂದು ಸಭಾಮಂಟಪಮಧ್ಯಸ್ಥಿತಮಣಿಪೀಠಮನಲಂಕರಿಸಿ ಗಾಡಿಯಿಂ ಮೂರ್ತಿಗೊಂಡು, ಸಮಸ್ತಸುರವಿಸರಂ ಪರಿವಿಡಿಯಿಂ ನೆರೆದುಚಿತ ಸ್ಥಾನದೊಳ್ ನಿಂದೋಲಗಿಸೆ, ಲೀಲೆ ಮಿಗೆ ಸರ್ವರ್ಗೆ ಸಕಲವರಪ್ರದನೆನಿಸಿ ಪೆರ್ಮೆವೆತ್ತು;

ಮತ್ತೇಭ

ಪರಮಾನಂದ[೩]ಮಯಂ ಪ್ರಸ[೩]ನ್ನವದನಂ ಪದ್ಮಾಪ್ತಕೋಟಿಪ್ರಭಾ
ವರಣಂ ಪನ್ನಗಭೂಷಣಂ ತ್ರಿಭುವನಾಧೀಶಂ ತ್ರಿತತ್ವಾತ್ಮಕಂ
ನಿರಘಂ ನಿಶ್ಚಲನಪ್ರತರ್ಕ್ಯಮಹಿಮಂ ಗೌರೀಶನೊಪ್ಪಿರ್ದನ
ಚ್ಚರಿವೀಱುತ್ತಖಿಳರ್ಗೆ ಸಂತತಕೃಪಾರತ್ನಾಕರಂ ಶಂಕರಂ ೫೮

ಪದಿನಯ್ದನೆಯಧ್ಯಾಯಂ

ಪದಿನಯ್ದನೆಯಧ್ಯದೆನಿಸುವ
ಮದನಾರಿಯ ಶಬರಲೀಲೆಯಂ ವಸ್ತುಕಮಾ
ರ್ಗದೊಳ[೪]ರೆದೆಂ ಕೆಯ್ಕೊಳ್ವುದು
ಸದಮಳಮೃಡಭಕ್ತರೆನಿಪ ವಿಬುಧರ್ ಧರೆಯೊಳ್ ೫೯

ನೆರೆದೀರೇಕಾದಶವರ್ಷದ
ಹರಯದೊಳ್ಭವಪ್ರಸಾದಬಲದಿಂ ಕವಿತಾ
ತರುಣಿ ಷಡಕ್ಷರದೇವನ
ನೆರವಿಲ್ಲದೆ ವರಯಿಸಿರ್ದಳೆಂದೆನೆ ವಿಬುಧರ್ ೬೦

---

೧-೧ ಪುರವಂ (ಯ) ೨ ಬರಿಯಾ (ಚ) ೩-೩ ಮಯಪ್ರಸ (ಚ)
೪ ಪರಯ (ಚ); ಹರೆಯ (ಯ).

ಚಂಪಕ

ಬಹುತರಜನ್ಮಕೋಟಿಗಳೊಳಾರ್ಜಿಸಿದುತ್ತಮಪುಣ್ಯದೇಟಿಯಿಂ
ಮಹಿಯೊಳೆ ಸತ್ಕವಿತ್ವದಿವಿಷನ್ಮಣಿ ಸಾರ್ಗುಮುದೀಗುಮದ್ಭುತಾ
ವಹಸುಖಮಂ ಲಸತ್ಕವಿಗೆ ಸಾರ್ಚುಗುಮುಜ್ಜ್ವಳಕೀರ್ತಿಯಂ ಸದಾ
ಮಹಿತಪದಾರ್ಥಮಂ ಕುಡುಗುಮೀಶ್ವರನೊಲ್ಮೆಯನುಂಟುಮಾಡುಗುಂ ೬೧

ಉತ್ಪಲ

ಸಕ್ಕದಗಬ್ಬಮಂ ಮಿಸುಪ ಕನ್ನಡಗಬ್ಬಮನೊಲ್ದು ಕೋವಿದರ್
ಚೆಕ್ಕಸಮುತ್ತು ಮಚ್ಚಿ ಪೊಗಟುತ್ತಿರೆ ಸಂಭುಕೃಪಾವಶೇಷದಿಂ
ಮೊಕ್ಕಳಮಾಗೆ ಸರ್ವರಸಮೊಪ್ಪಿರೆ ಪೇಳ್ದನಶೇಷಕಾವ್ಯಬೃಂ
ದಕ್ಕದು ಸಾರಮೆಂದೆನೆ ಷಡಕ್ಷರದೇವನದೇಂ ಪ್ರಗಲ್ಭನೋ ೬೨

ಚಂಪಕ

ಪ್ರವಿಮಳರಾಜಶೇಖರವಿಳಾಸಮಹಾಕೃತಿಯಂ ವೃಷಾಧಿರಾ
ಜವಿಜಯಸತ್ಪ್ರಬಂಧಮುಮನೊಪ್ಪುವ ಕನ್ನಡದಿಂ ನಿಮಿರ್ಚಿದಂ
ಭುವನವಿನುತ್ಯಮಾಗೆ ಕವಿಕರ್ಣರಸಾಯನವೆಂಬ ಕಬ್ಬಮಂ
ಪ್ರವಿತತಸಂಸ್ಕೃತೋಕ್ತಿಯೊಳೊಡರ್ಚಿದನಲ್ತೆ ಷಡಕ್ಷರಾಹ್ವಯಂ ೬೩

ಗದ್ಯ

ಇದು ನಿಖಿಲ[1]ಭುವನೈಕವಲ್ಲಭಸುರಾಸುರೇಂದ್ರವರದಕರುಣಾವರಣಪರಮಶಿವಲಿಂಗ ತರುಣಪತಂಗಸಂಗತಮಂಗಳಹೃದಯಾರವಿಂದಬಂಧುರಸರಸಸಜ್ಜನ[2]ಮಾನಿತೋಭಯಕವಿತಾವಿಚಕ್ಷಣ[3] ಶ್ರೀಷಡಕ್ಷರದೇವ ವಿರಚಿತಮಾದ ಕಿರಾತರುದ್ರಲೀಲಾ ಕಥನವಿಪುಳಪ್ರಬಂಧದೊಳ್ ಶಂಕರ[4]ಪ್ರಸನ್ನತಾವರ್ಣನಂ[4]
ಪಂಚಮಾಶ್ವಾಸಂ ಪರಿಸಮಾಪ್ತಂ.

ಶಬರಶಂಕರವಿಳಾಸಂ ಸಮಾಪ್ತಂ

ಮಂಗಳಮಹಾ ಶ್ರೀಶ್ರೀಶ್ರೀ

೧ ಸಮಸ್ತ (ಚ, ಜ)  ೨ ಸರಸಜನ (ಯ)  ೩ ವಿಶಾರದ (ಯ)  ೪–೪ ಪ್ರಸನ್ನವರ್ಣನಂ (ಗ, ಚ, ತ, ಜ)

# ಪರಿಶಿಷ್ಟ ೧

## ಶಬರಶಂಕರವಿಳಾಸದಲ್ಲಿಯ ಪದ್ಯಗಳ ಅಕಾರಾದಿ

[ ಆ = ಆಶ್ವಾಸ, ಪ = ಪದ್ಯಸಂಖ್ಯೆ, ಪು = ಪುಟಸಂಖ್ಯೆ ]

| ಆರಂಭದ ಶಬ್ದಗಳು | ಆ. | ಪ. | ಪು. |
|---|---|---|---|
| **ಈ** | | | |
| ಈತಂ ನರನಕ್ಕುಮೊ | ೪ | ೯೭ | ೭೯ |
| **ಉ** | | | |
| ಉದಯಿಸಿ ತೋರ್ಪ | ೨ | ೩೦ | ೨೬ |
| ಉರುಳಿಂಗಾಕಾರದಿಂ ನೀನಿರೆ | ೨ | ೨೧ | ೨೫ |
| ಉಱಿದು ಪುಳಿಂದಿನೀವಿಹಿತ | ೫ | ೧೩ | ೮೯ |
| ಉಱಿವೆಳಗು ಸಂಜೆ | ೪ | ೧೧೪ | ೮೨ |
| **ಎ** | | | |
| ಎಚ್ಚಂಬುಗಳವು | ೪ | ೧೭ | ೬೩ |
| ಎಚ್ಚೊಡಿಳೆಯುದಿರೆ | ೪ | ೨೨ | ೬೪ |
| ಎತ್ತಣ ಬನಮೆತ್ತಣ ಕಿಟಿ | ೪ | ೯೬ | ೭೮ |
| ಎನಿತಂ ತಾನೆಚ್ಚ | ೪ | ೫೫ | ೭೧ |
| ಎನೆ ನಸುನಕ್ಕು ಮಾರರಿಪು | ೪ | ೩೦ | ೬೬ |
| ಎಂದವನುಕ್ತಿಯುಂ | ೪ | ೩೨ | ೬೭ |
| ಎಂದಿಂತು ಚಿಂತಿಸುತೆ | ೪ | ೧೩೬ | ೮೫ |
| ಎಂದೊರೆದು ಕರುಣಿಸುತೆ | ೫ | ೫೨ | ೯೬ |
| ಎನ್ನ ಭುಜಾಗ್ರವಿಕ್ರಮಕೆ | ೪ | ೮೬ | ೭೭ |
| ಎನ್ನಾಳ್ದಂ ನೀನಿರುತಿರೆ | ೪ | ೧೦೫ | ೮೦ |
| ಎರಡುಂ ಕಡೆವಾಯೊಳ್ | ೩ | ೪೪ | ೫೫ |
| ಎಲೆ ಎಲೆ ಪಂದಿ ಪಂದಿ | ೪ | ೬ | ೬೧ |
| ಎಲೆ ಗಿರಿಜಾತೆ ನೋಡಿವನ | ೪ | ೬೬ | ೭೩ |
| ಎಲೆ ಗೊರವ ಚಾಪ | ೪ | ೬೩ | ೭೨ |
| ಎಲೆ ಶಬರ ಕಾಡ ಬಡನರಿ | ೪ | ೨೭ | ೬೬ |
| ಎಲೆ ಶಬರ ನಿನ್ನ | ೪ | ೪೯ | ೭೦ |
| ಎಲ್ಲಂದದಿನಾಹವದೊಳ್ | ೪ | ೯೪ | ೭೮ |
| ಎಳನೇಸಱ ಬಿಂಬದ | ೫ | ೪ | ೮೭ |
| ಎಳಮುತ್ತಿನ ಶಂಖದ | ೫ | ೭ | ೮೮ |
| ಎಳವಳಿಕಿನ ಬೆಳ್ವೆಳಗಂ | ೫ | ೩ | ೮೭ |
| ಎಳವೆಱೆಯಾಂತ | ೧ | ೭೬ | ೧೪ |
| **ಏ** | | | |
| ಏನಾದೊಡೇನೊ ನಿನ್ನ | ೪ | ೩೫ | ೬೭ |
| **ಒ** | | | |
| ಒಕ್ಕುದು ನೆತ್ತರ್ ಬಾಯಿಂ | ೪ | ೮೮ | ೭೭ |
| ಒಡಲಂ ಪುತ್ತಡರ್ದೆತ್ತಲುಂ | ೨ | ೬೯ | ೩೬ |
| ಒದೆದಿಳೆಯುಂ ಪುಟಂ ನೆಗೆದು | ೩ | ೫೪ | ೫೭ |
| ಒದೆದು ಧರಿತ್ರಿಯಂ | ೪ | ೧೬ | ೬೩ |
| ಒದೆದೆಡೆಗೊಂಡ ಬಿಲ್ಲ | ೪ | ೪೨ | ೬೮ |
| ಒರಸೆ ಕರಿಕಟದ ಮದದಿಂ | ೩ | ೩೮ | ೫೪ |
| ಒರೆದೇಕಾಂತದೊಳೊಲ್ಪಿನಿಂದೆ | ೫ | ೪೬ | ೯೫ |
| ಒಳಗೊಳಗಬಿಲ್ದು | ೪ | ೯೨ | ೭೮ |
| ಒಳಸೋರ್ದುದು ಶಾಂತಿರಸಂ | ೪ | ೩೭ | ೬೮ |
| **ಕ** | | | |
| ಕಟಕಿಯಿದೇಂ ಪುಳಿಂದ | ೪ | ೩೩ | ೬೭ |
| ಕಂಡನಖಂಡಪುಷ್ಪಭರ | ೪ | ೧೧೦ | ೮೧ |
| ಕನಕಕ್ಷ್ಮಾಧರವಪ್ರದೊಳ್ | ೧ | ೭ | ೨ |
| ಕನ್ನಡಿಯಲ್ಲಿ ಮಾರ್ಪೊಳೆವ | ೧ | ೭೧ | ೧೩ |
| ಕಮಲಭವಾಂಡಕೋಟಿಗಳ | ೫ | ೪೯ | ೯೬ |
| ಕರಜಪಮಾಲೆಯೆತ್ತ | ೨ | ೮೨ | ೩೮ |
| ಕರದೊಳ್ ಕನಕಚಾಮರಂ | ೧ | ೭೮ | ೧೫ |
| ಕರಮೊಸೆದತ್ತು ದೇವನಗದಿಂ | ೨ | ೩೬ | ೨೮ |
| ಕರಿ ಕೇಸರಿಯುಂ ಕೆಣಕಿದ | ೪ | ೨೯ | ೬೬ |
| ಕರಿಗೆ ಕರಾಗ್ರಮುಂ | ೩ | ೪೭ | ೫೫ |
| ಕರಿದೈತ್ಯಧ್ವಂಸಿ | ೨ | ೨೩ | ೨೫ |
| ಕರಿಯ ಗುರುಕುಂಭಮಂ | ೩ | ೬೦ | ೫೮ |
| ಕರಿರಿಪು ಮತ್ಸರಂ | ೩ | ೨೮ | ೫೦ |
| ಕರುಣಿಪುದೆನಗೆಲೆ | ೫ | ೪೪ | ೯೫ |
| ಕರುಣಿಸು ಕಾಲಸಂಹರ | ೫ | ೨೦ | ೯೦ |
| ಕರೆಗಣ್ಮುವ ಸುಖಜಲ | ೨ | ೨೪ | ೨೫ |
| ಕಲಹಂ ತಕ್ಕುದೆ | ೪ | ೧೨೪ | ೮೩ |
| ಕಳಕಂಠಂಗಳ ಬಗ್ಗಣೆ | ೨ | ೪೫ | ೩೨ |
| ಕಾದುವ ಕೆಯ್ದು | ೪ | ೬೭ | ೭೩ |
| ಕಾಮನ ಸಾಮಜಂ | ೨ | ೪೬ | ೩೨ |
| ಕಿನ್ನರಿಯಿಂಚರಂ | ೨ | ೪೦ | ೨೯ |
| ಕಿವಿಗಮುದಾರ್ಗೆ | ೧ | ೧೦ | ೩ |
| ಕುಡಿದಂ ಕುಂಭಜ | ೧ | ೩೧ | ೬ |
| ಕುಡಿಮಿಂಚಂ ತಳ್ತು | ೨ | ೮ | ೨೨ |
| ಕುಡಿವಾಲಂ ನೆತ್ತಿಯೊಳ್ | ೩ | ೬೨ | ೫೮ |
| ಕುಲಗಿರಿಯುಗ್ಮಮಾಳ್ದ | ೪ | ೭೨ | ೭೪ |
| ಕುಲಗಿರಿ ಸಂಚಲಿಸಿದೊಡಂ | ೪ | ೬೮ | ೭೩ |
| ಕುಲಿಶಧರಂ ಧನಂಜಯ | ೩ | ೨೦ | ೪೯ |

# ಪರಿಶಿಷ್ಟ ೨

## ಶಬರಶಂಕರವಿಳಾಸದಲ್ಲಿಯ ಕಠಿಣ ಶಬ್ದಗಳ ಕೋಶ

[ **ಸೂಚನೆ:—** ಪ್ರತಿ ಶಬ್ದಾರ್ಥದ ಕೊನೆಗೆ ಕೊಟ್ಟ ಅಂಕೆಗಳು ಆಶ್ವಾಸ ಮತ್ತು ಪದ್ಯ ಇವುಗಳನ್ನು ಕ್ರಮವಾಗಿ ಸೂಚಿಸುತ್ತವೆ. ಅಂಕೆಯ ಮುಂದೆ ಒಮ್ಮೊಮ್ಮೆ ಬರುವ 'ವ' ಎಂಬುದು ಆ ಪದ್ಯದ ಮುಂದಿನ ವಚನವನ್ನು ಸೂಚಿಸುತ್ತದೆ. ]

### ಅ

ಅಂಶು—ಕಿರಣ, ಕಾಂತಿ ೧, ೬೧
ಅಕ್ಷರ—ನಾಶರಹಿತವಾದ ೧, ೪
ಅಖರ್ವ—ಬಹಳ ೪, ೨
ಅಗಾಹಿತರತ್ನ—ಇಂದ್ರನೀಲಮಣಿ ೩, ೧೧
ಅಗಿ—ಬೆದರು ೧, ೩೮
ಅಗುರ್ವಿಸು—ಭಯವನ್ನುಂಟುಮಾಡು ೪, ೯
ಅಗ್ಗಿಮೊಗ (ಸಂ. ಅಗ್ನಿಮುಖ)—ದೇವತೆ ೫, ೯
ಅಚ್ಚರಿ—೧ (ಸಂ) ಅಪ್ಸರಾ; ೨ (ಸಂ) ಆಶ್ಚರ್ಯ ೧, ೪೫
ಅಚ್ಚಿಗ—ವಿಸ್ಮಯ ೪, ೧೭
ಅಜಸ್ರಂ—ಯಾವಾಗಲೂ ೧, ೭
ಅಂಜನ—ಕಾಡಿಗೆ ೫, ೫
ಅಟ್ಟೆ—ತಲೆಹರಿದ ದೇಹ, ಮುಂಡ ೪, ೧೬
ಅಡಗು—ಮಾಂಸ ೩, ೩೯; ಯೋಗ್ಯತೆ ೪, ೪೫
ಅಡರ್ಪು—ನೆಲೆ, ಆಶ್ರಯ ೧, ೮೧ ವ
ಅಣಿಯರಂ—ಅತಿಶಯವಾಗಿ ೧, ೨೫
ಅಂಡಲೆ—ಕಾಟ ೧, ೫೨
ಅಂಡುಗೊಳ್—ಸಮೀಪಿಸು ೪, ೬ ವ
ಅಣ್ಪು—ಲೇಪನ ೩, ೧೬
ಅಣ್ಮು—ಪೌರುಷದೋರಿ ೪, ೩೯
ಅಧಿಜ್ಯ—ಹೆದೆಯೇರಿಸಿದ ೪, ೨೪
ಅಧ್ವರಿ—ಹೋಮಮಾಡುವವ ೨, ೪೮
ಅನಂತರತ್ನ (ಅನಂತ—ಆಕಾಶ)—ಸೂರ್ಯ ೧, ೧೩
ಅನವದ್ಯ—ದೋಷರಹಿತ ೪, ೧೧೮
ಅನಾಮಯ—ಶುದ್ಧ, ಶಿವ ೨, ೯೮
ಅನಿಶಂ—ಯಾವಾಗಲೂ ೧, ೩೭
ಅನೋಕಹ—ಮರ ೧, ೫೧
ಅಂತುಱಿಂ—ಅದುದರಿಂದ ೫, ೪೬
ಅಪಾಂಗ—ಕಡೆಗಣ್ಣು ೨, ೩
ಅಭಿಷಂಗ—ಬೈಗುಳು ೪, ೧೭ ವ
ಅಭ್ಯರ್ಹಿತ—ಸನ್ಮಾನ್ಯ ೪, ೧೧೮
ಅಮರ್ದಾಗು—ಸರಿಯಾಗು ೧, ೧೦
ಅಮರ್ದುಗೆಯ್ಯ—ಅಮೃತಕಿರಣಗಳುಳ್ಳವ, ಚಂದ್ರ ೨, ೩೪
ಅಮೃತ—(೧) ಹಾಲು; (೨) ನೀರು ೧, ೩೩
ಅರಿದು—ಅಶಕ್ಯ, ಆಶ್ಚರ್ಯ ೪, ೫೩
ಅರ್ಗಳ—ದೊಡ್ಡ ೩, ೬೧
ಅರ್ಜುನ—(೧) ಬಿಳಿಯ; (೨) ಅರ್ಜುನನೆಂಬ
ಅರ್ದಿತ—ಸೋಲಿಸಲ್ಪಟ್ಟ ೧, ೫
ಅರ್ದಿಸು—ತಡೆ, ಸೋಲಿಸು ೨, ೯೦
ಅಲಂಪು—ಸೊಗಸು, ವಿಭವ ೧, ೨೮
ಅಲೆ—ಅಲುಗಾಡಿಸು ೧, ೪೭
ಅವಗಾಹಂ—ಮುಳುಗಿ ೨, ೧೦೦
ಅವ್ವಳಿಸು—ಅಡರು ೪, ೮
ಅಸವಸ—ಅವಸರ ೧, ೪೦
ಅಹೀನ—(೧) ಸರ್ವಶ್ರೇಷ್ಠ, ಹಾವಿನ ಸಂಬಂಧವುಳ್ಳ; (೩) ಶ್ರೇಷ್ಠವಾದ ೧, ೧
ಅಹೀಂದ್ರ—ದೊಡ್ಡ ಹಾವು ೨, ೫೫
ಅಳಱ್—ಅಂಜು ೨, ೮
ಅಳಲ್—ದುಃಖ ೧, ೩೧
ಅಳವಾಱು—ಶಕ್ತಿಗುಂದು ೧, ೪೪

ಅಳವಿಗಳಿದ–ಅಳತೆಮೀರಿದ ೧, ೭೯ವ
ಅಳಿಕ–ಹಣೆ ೧, ೮೧ ವ
ಅಳುಂಬ–ಅತಿಶಯ ೪, ೧೨
ಅಳುರ್–ಆವರಿಸು, ತುಂಬು ೫, ೧೦
ಅಳುರ್ಕೆ–ಹೆಚ್ಚಳ, ಅಧಿಕ್ಯ ೧, ೬
ಅಳ್ಳಿಱಿ–ನಡುಗಿಸು ೪, ೯೦
ಅಟ್ಕಱ್–ಪ್ರೀತಿ ೨, ೮೪

## ಆ

ಆದಂ–ಅಧಿಕವಾಗಿ, ಹೆಚ್ಚಾಗಿ ೪, ೭೦
ಆನಕ–ತಮಟೆ, ಮದ್ದಳೆ ೩, ೨೨
ಆಭೀಳ–ಕಠಿಣ, ಭಯಂಕರ ೨, ೮೬
ಆಮ್ನಾಯ–ವೇದ ೨, ೮೫
ಆಂಪ–ಎದುರಿಸುವ ೪, ೩೪
ಆರ್–ಗಟ್ಟಿಯಾಪಿ ಒದರು ೪, ೧೪
ಆರಯ್–ಪರೀಕ್ಷಿಸು, ವಿಚಾರಿಸು ೪, ೨೪ ವ
ಆರ್ಪು–ಪರಾಕ್ರಮ, ಸಾಹಸ ೪, ೧೦
ಆಲವಾಲ–ಗಿಡದ ಸುತ್ತಲೂ ನೀರು ನಿಲ್ಲಲಿಕ್ಕೆ ಮಾಡಿದ ಕಟ್ಟೆ ೧, ೩೫
ಆವಿಲ–ಮಲಿನ ೫, ೧೮
ಆಶಯ–ಭಾವ, ಮನಸ್ಸು ೪, ೧೦೩
ಆಶುಗಮಿತ್ರ–ಬೆಂಕೆ ೨, ೯
ಆಶ್ರಯಾಶ–ಬೆಂಕೆ ೫, ೧೬
ಆಹವ-ಯಜ್ಞ ೪, ೫೬
ಆಳ್ವರಿ–ಅಗಳ್ತೆಯಮೇಲಿನ ಗೋಡೆ ೧, ೫೧

## ಇ

ಇಟ್ಟೆಡೆ–ಇಕ್ಕಟ್ಟಾದ ಸ್ಥಳ ೪, ೨೩
ಇಡಿಕಿಱಿ–ತುಂಬು, ತೀವು ೪, ೧೧೨
ಇಂದ್ರಗೋಪ–ಹೊನ್ನೆಯ ಹುಳು ೨, ೪೨ ವ
ಇಂಬು–ಸ್ಥಾನ ೨, ೪೨ ವ

## ಈ

ಈಡಿಱಿ–ಕೊಂಬಿನಿಂದ ತಿವಿ ೧, ೩೩
ಈಂಟು–ಕುಡಿ ೧, ೭

## ಉ

ಉಚ್ಚಳಿಸು–ಒಳಹೊಕ್ಕು ಪಾರಾಗು ೪, ೧೭
ಉಟಜ–ಪರ್ಣಶಾಲೆ ೨, ೭೪
ಉತ್ಕರ–ಸಮೂಹ ೧, ೩೫
ಉತ್ತಮಾಂಗ–ತಲೆ ೧, ೧೦೯
ಉತ್ಸಂಗ–ತೊಡೆ ೧, ೧
ಉದ್ಗಮ–ಹೂ ೨, ೪೧
ಉಪಾಯನ–ಕಾಣಿಕೆ ೨, ೪೨ ವ
ಉರರೀಕರಿಸು–ಸ್ವೀಕರಿಸು ೧, ೧೪
ಉರ್ಬಟೆ–ಶೌರ್ಯಾತಿರೇಕ ೪, ೬೫
ಉರ್ವಿ–ಹೆಚ್ಚಾಗಿ ೪, ೬೭
ಉಲ್ಬಣ–ಬಲವಾದ ೧, ೨೧
ಉಳ್ಕು–ಮಿಂಚು, ಹೊಳೆ, ೧, ೪೬
ಉರಿಹತ್ತು ೪, ೭೧
ಉಳ್ಳಲರ್–ಅರೆಬಿರಿದ ಹೂ ೧, ೫೧

## ಋ

ಋಕ್ಷ–(೧) ಕರಡಿ (೨) ನಕ್ಷತ್ರ ೩, ೨೯

## ಎ

ಎಕ್ಕಲ–ಕಾಡಹಂದಿ ೪, ೫
ಎಟ್ಟು–ನಿಲುಕು ೪, ೩೫
ಎಡ್ಡಮಾಗು–ಶೋಭಿಸು ೩, ೭
ಎಂಟಡಿ–ಶರಭ ೨, ೬೫
ಎರೆ–ಬೇಡು ೫, ೪೩
ಎಱಕ–ಬೀಳುವಿಕೆ, ಅವಮಾನ ೪, ೮೯
ಎಸಕ–ಕಾರ್ಯ ೪, ೭೬
ಎಳವಿ–ಸರಿಗೊಳಿಸಿ ೨, ೫೦
ಎಳಸು–ಆಸೆಮಾಡು ೪, ೬೯

## ಐ

ಐಳಿದಂಗೆಯ್–ನಿಂದಿಸು, ತಿರಸ್ಕರಿಸು ೪, ೩೦ ವ

## ಒ

ಒಚ್ಚತಂ–(೧) ಸಂಪೂರ್ಣವಾಗಿ, (೨) ಸಂತೋಷದಿಂದ ೨, ೮೯; ಆಶೆಮಾಡಿ
ಒಟ್ಟಜೆ–ಶೌರ್ಯ, ಪರಾಕ್ರಮ ೪, ೬ ವ
ಒಱಲ್ದು–ಪ್ರೀತಿಪಟ್ಟು ೨, ೪೬

ಒಲ್–ಪ್ರೀತಿಸು, ಇಚ್ಛಿಸು, ೧, ೧೮
ಒಸಗೆ–ಉತ್ಸವ, ಸಂತೋಷ ೨, ೪೨ ವ
ಒಳಱು–ಆರ್ಭಟಿಸು, ಗರ್ಜಿಸು, ೪, ೬೦
ಒಳ್ಪರಿಜು (ಒಳ್+ಪರಿಜು)–ಸುಂದರ ಕಾಯ ೫–೯

## ಓ

ಓಲ (ಓಲಾಡುವಿಕೆ)–ತೂಗಾಟ; ಸಂತೋಷ ೧, ೪೩
ಓವು–ರಕ್ಷಿಸು, ಕಾಪಾಡು ೧, ೨೫
ಓಸರಿಸು–ಹಿಂದೆಗೆ ಓರೆಯಾಗು ೪, ೫೯

## ಔ

ಔರ್ವ–ಬಡಬಾಗ್ನಿ ೧, ೩೦

## ಕ

ಕಂಕೇಲ್ಲಿ–ಅಶೋಕೆ ೨, ೪೨ ವ
ಕಜ್ಜಲ–ಕಾಡಿಗೆ ೩, ೧೮
ಕಟಿ–ಹಣೆಯ ಮುಂಭಾಗ ೨, ೫೯
ಕಟಕ–೧) ಕಡಗ ೨) ಬೆಟ್ಟದ ತಪ್ಪಲು ೧, ೧; ಹೆದೆ ೩, ೫೨; ಕುಂಡಲ, ಕಡಗ ೪, ೧
ಕಟಕಿ–ಅಪಹಾಸ್ಯ ೪, ೩೩
ಕಟ್ಟೞಿಕೆಯ–ಸುಪ್ರಸಿದ್ಧವಾದ ೫, ೧೫
ಕಟ್ಟುವಗ್ಗ–ಕಟ್ಟುವ ಹಗ್ಗ ೪, ೧೩೫
ಕವಂಗಿ–ರಭಸದಿಂದ ನಿಲ್ಲಿಸಿ ೧, ೨೯
ಕಡಂಗು–ಪ್ರಯತ್ನಿಸು, ಉತ್ಸಾಹಪಡು ೧, ೨೯
ಕಡವರ–ನಿಧಿ ೫, ೧೪ ವ
ಕಡೆಗಣ್ಚು–ಅಲಕ್ಷ್ಯಮಾಡು ೧, ೨೯
ಕಣ್ಬೊಲಂದಪ್ಪು–ಕಣ್ಣಿಗೆ ಕಾಣದಂತಾಗು ೩, ೩೫ ವ
ಕತ–ಕಾರಣ, ನೆವ ೪, ೬೯
ಕದಿರ್–ಕಿರಣ, ಕಾಂತಿ ೧, ೪೫
ಕನಲ್–ಸಿಟ್ಟಾಗು ೨, ೪೨ ವ
ಕಬಂಧ–(೧) ನೀರಿನಿಂದ ಕೂಡಿದ್ದು (೨) ಮುಂಡ ೨, ೫೨
ಕಮಲಾಕರಹಿಮಕರ–ಸರೋವರವೆಂಬ ಚಂದ್ರ ೨, ೪೨ ವ
ಕಂಪಿಡಿದ–ಸುವಾಸನೆಯುಳ್ಳ ೨, ೩೯
ಕಂಬಲಾಶ್ವತ–ಕಂಬಲ–ಅಶ್ವತ ಎಂಬ ಇಬ್ಬರು ನಾಗ(ಸರ್ಪ)ರು. (ಇವರು ಕುಂಡಲ ರೂಪದಿಂದ ಈಶ್ವರನ ಕಿವಿಯಲ್ಲಿ ಸದಾ ಹಾಡುತ್ತಿರುವಂತೆ) ೧, ೨೯
ಕಂಬು–ಶಂಖ ೨, ೫
ಕರುತ್ತು–ಗುರಿಯಿಟ್ಟು ೪, ೬
ಕರೇಣು–ಹೆಣ್ಣಾನೆ ೩, ೪೨
ಕರ್ಣಿಕಾರ–ಬೆಟ್ಟದಾವರೆ ೧, ೩೫
ಕರ್ದಮ–ಕೆಸರು ೨, ೮೧
ಕಷೋರ್ಪಲ–ಒರೆಗಲ್ಲು ೨, ೪೨ ವ
ಕಲಾಪ–ಉಡಿದಾರ ೩, ೧೫; ಚಂದ್ರ ೫, ೨೦; ಆಭರಣ ೫, ೨೭
ಕಲಾಪಿ–ನವಿಲು ೨, ೫
ಕವರ್–ಸುಲಿ, ಅಪಹರಿಸು ೧, ೩೨
ಕಳಧೌತ-(೧) ಭಂಗಾರ, (೨) ಬೆಳ್ಳಿ ೧, ೫೪
ಕಳಂಬ–ಬಾಣ ೪, ೫೨
ಕಳಿಂದಜಾ–ಕಾಳಿಂದಿ, ಯಮುನಾನದಿ ೧, ೨
ಕಳೇವರ–ಮೈ, ದೇಹ ೧, ೪೨
ಕೞಿಲೆ–ಎಳಬಿದುರು ೩, ೩೭
ಕಾಂಡ-ಬಾಣ ೪, ೨೪ ವ
ಕಾಯ್ತು–ಕಾಯಿಬಿಟ್ಟ ೨, ೪೩
ಕಾದಲೆ–ಪ್ರಿಯತಮೆ ೪, ೬೭
ಕಾಂತ–ಮನೋಹರ ೨, ೪೨ ವ
ಕಾಯ್ಪು–ಸಿಟ್ಟು ೪, ೭
ಕಾಲಕ್ಷ್ವೇಳ–ಹಾಲಾಹಲವಿಷ ೨, ೧೦
ಕಾಲಾಧ್ವ–ಅಗ್ನೇಯ ೧, ೫೮
ಕಾವ್ಯ–ಶುಕ್ರಾಚಾರ್ಯ ೨, ೧೬
ಕಾಹಳಿಕಾ-ಕಹಳೆ ೨, ೪೨ ವ
ಕಾಬ್ಬುರಂ–ಕಾಡ ನದಿಯಂತೆ ೧, ೧೦
ಕಿಂಜಲ್ಕ–ಹೂಪಿನ ಕೇಸರ ೫, ೬
ಕಿಟಿ ಹಂದಿ ೪, ೫ ವ
ಕಿತವ–ಮೋಸಗಾರ ೨, ೧೧೧
ಕಿತ್ತಡಿ–ಋಷಿ ೨, ೮೩
ಕಿಂನರಿ–(೧) ವಾದ್ಯವಿಶೇಷ (೨) ಕಿಂನರಸ್ತ್ರೀ ೨, ೪೦

ಕಿಬ್ಬರಿ–ಪಕ್ಕೆ ೩, ೫೧
ಕಿರಿ–ಹಂದಿ ೪, ೧೯
ಕುಡು–ಕೊಂಕಾದ ೪, ೧೬
ಕುತ್ತುಜು–ಹೊದರು ೪, ೨೩
ಕುನುಂಗು–ಮೈ ಕುಗ್ಗಿಸು, ಜಪ್ಪಿಸು ೪, ೭೩
ಕುಂಬಿಡು–ಪೊಡಮಡು ೫, ೫೪
ಕುಂಭಿ–ಆನೆ ೨, ೫
ಕುರುಜು–ಬಿದಿರಿನ ಮಂಟಪ ೨, ೪೨ ವ
ಕುವಾರಿ–(೧) ಭೂಮಿಯ ಮೇಲಿನ ನೀರು, (೨) ಕೆಟ್ಟ ನೀರು ೧, ೨೨
ಕುಶೆ–ದರ್ಭೆ ೨, ೧೦೮
ಕುಶೇಶಯ–ನೀರಿನಲ್ಲಿರುವಂತಹದು ಕಮಲ ೨, ೪
ಕೂವಕಂಬ (ಸಂ. ಕೂಪಸ್ತಂಭ) ಹಡಗದ ಪಟಸ್ತಂಭ ೨, ೪೪
ಕೃಚ್ಛ್ರ–ಕಠಿಣ ತಪಸ್ಸು ೪, ೧೨೬
ಕೃತ್ತ–ಕತ್ತರಿಸಲ್ಪಟ್ಟ ೫, ೨೦
ಕೆಂಗಣ್ವಕ್ಕಿ–ಕೋಗಿಲೆ ೨, ೪೨ ವ
ಕೆಂಗಲಿಪ–ಕೆಂಪೇರುವ ೪, ೧೨
ಕೆಣಕು–ಸೆಣಸು, ಸಿಟ್ಟಿಗೆಬ್ಬಿಸು ೪, ೧೦
ಕೆನ್ನೀರ್–ನೆತ್ತರು ೪, ೨೨
ಕೆಯ್ಗಣ್ಣು–ಉಂಟಾಗು ೧, ೪೮
ಕೆರ್ಪು–ಕೆರವು, ಚಪ್ಪಲಿ ೩, ೨೭
ಕೇಣ–ಮತ್ಸರ ೪, ೧೦
ಕೇಣಂಬಡೆದು–ಸಾವಕಾಶವಾಗಿ ೪, ೮೭
ಕೇಳಿಕೆ–(೧) ಪ್ರಸಿದ್ಧಿ (೨) (ಸ, ಕೇಲಿಕಾ) ನುಡಿಸುವಿಕೆ ೧, ೭೯ ವ
ಕೊಕ್ಕರಿಸು–ಬೆದರಿಸು ೪, ೧೩
ಕೊಡಂಕೆ–ಕಿವಿ ೨, ೪೦
ಕೊಣಕಿಡು–ಚಿಗಿ, ಹಾರು ೩, ೫೧
ಕೊಣಸು–(ಚಿಗರೆ) ಮರಿ ೨, ೪೦
ಕೊನರ್–ಚಿಗುರು ೨, ೪೩
ಕೊಪ್ಪು–ಬಿಲ್ಲಿನ ಕೊನೆ, ಕೋಟಿ ೪, ೨೪ ವ
ಕೊಳಗುಳ–ರಣಭೂಮಿ ೨, ೫೨
ಕೋದಂಡಕೋಟಿ–ಬಿಲ್ಲಿನ ತುದಿ ೪, ೧೭ ವ
ಕೋದು–ದಾರಪೋಣಿಸಿ ೨, ೬೪

ಕೌಶಿಕ–ಗೂಗೆ ೧, ೨೦
ಕೌಸುಂಭ–ಕುಸುಬೆಯ ಹೂವಿನ ೧, ೭೨ ವ
ಕ್ಷಣರುಚಿ–ಮಿಂಚು ೧, ೭೮ ವ
ಕ್ಷ್ಮಾಧರ–ಪರ್ವತ ೧, ೭

## ಖ

ಖಲೀನ–ಕಡಿವಾಣ ೨, ೩೮

## ಗ

ಗಂಡಿಕೆ–ಪರಾಕ್ರಮ, ಶಕ್ತಿ ೩, ೫೪
ಗಜಿವೂ–ಕೇದಗೆ ೩, ೩,
ಗಾಂಗ–ಗಂಗಾನದಿಯ ೨, ೨೬
ಗಾಡಿ–ಸೊಬಗು ೫, ೫೪
ಗಾಂಪ–ಹೆಡ್ಡ, ಎಗ್ಗ ೧, ೨೪
ಗಾರುತ್ಮತರತ್ನ–ಗರುಡಮಣಿ ೫, ೩೩
ಗಾವರಿಪ–ಝೇಂಕರಿಸುವ ೨, ೫೮
ಗಿರಿಕಾ–ಇಲಿ ೧, ೬೪
ಗುಣ–(೧) ದಾರ, (೨) ಸದ್ಗುಣ ೧, ೧೬
ಗುಣಿ–(೧) ಬಟ್ಟಿ, (೨) ಸದ್ಗುಣಿ ೧, ೧೬
ಗೆಂಟು–ದೂರ ೨, ೧೦೭
ಗೇಣ್–ಕತ್ತಿ ೩, ೧೬
ಗೈರಿಕ–'ಜಾಜು' ಎಂಬ ಕೆಂಪು ಮಣ್ಣು ೩, ೪
ಗೋಕರ್ಣ–ಸರ್ಪ ೪, ೧

## ಘ

ಘನರಸ–(೧) ಮೇಘಜಲ, (೨) ಶ್ರೇಷ್ಠವಾದ ರಸ ೧, ೨೨
ಘೃಣಿ–ತೇಜಸ್ಸು ೧, ೭೦

## ಚ

ಚಕ್ರಾನಿಲ–ಸುಂಟರಗಾಳಿ ೨, ೪೨ ವ
ಚಂಚರೀಕ–ತುಂಬಿ ೫, ೧೧
ಚಂದ್ರಕಿ–ನವಿಲು ೧, ೫೯
ಚುರ್ಚು–ಸುಡು ೨, ೯
ಚೊಲ್ಲೆಯ–ತುರುಬಿನ ಕೊನೆ ೩, ೧೦
ಚೌದಂತ–ಐರಾವತ ೩, ೪೪

## ಜ

ಜಡ-(೧) ನೀರು (೨) ಮಾಂದ್ಯ ೧, ೪೨

ಜನ್ಯ-ಯುದ್ಧ ೪, ೧೨೭

ಜಾತರೂಪ-ಬಂಗಾರ ೧, ೭೮ ವ

ಜಾಯಿಲ-ನಾಯಿ ೪, ೧೦

ಜೀಮೂತವಾಹ-ಇಂದ್ರ ೨, ೪೨ ವ

ಜೊನ್ನ(ಸಂ)ಜೋತ್ಸ್ನಾ-ಬೆಳ್ದಿಂಗಳು ೧, ೨೪

## ಟ

ಟಂಕ-ಒಂದು ಆಯುಧ ೫, ೨

ಟೊಣೆ-ತಪ್ಪಿಸಿಕೊಳ್ಳು, ಮೋಸಮಾಡು ೪, ೧೦

## ಡ

ಡಗೆ-ಮೋಸ ೪, ೭೬

ಡವಕೆ-ಪೀಕದಾನಿ, ಕಾಳಂಜಿ ೧, ೭೮

ಡಿಂಡೀರ-ನೊರೆ ೧, ೩೦

ಡೊಕ್ಕರ-ಗುದ್ದು ೪, ೭೫

## ತ

ತಂಗದಿರ್ಗಲ್-ಚಂದ್ರಕಾಂತ ಶಿಲೆ ೧, ೫೦

ತಟಿದಂಗನೆ-ಮಿಂಚೆಂಬ ಸ್ತ್ರೀ ೧, ೪೨

ತನು-ಸಣ್ಣ ೨, ೮೬

ತರಕ್ಷು-ಹುಲಿ ೩, ೨೮

ತರದಿಂ-ಕ್ರಮವಾಗಿ ೧, ೪೮

ತಱಿಸಂದು-ನಿಶ್ಚಯಿಸಿ ೪, ೯೮

ತವಿಸು-ಕಡಿಮೆ ಮಾಡು, ನಾಶಮಾಡು ೪, ೨೪ ವ

ತಳರ್-ಹೋಗು ೨, ೪೨ ವ

ತಳವೆಳಗಾಗು-ತಳಮಳಿಸು, ಬೆರಗಾಗು ೪, ೧೧೪

ತಳ್ವದೆ-ತಡಮಾಡದೆ ೧, ೪೭

ತಳ್ಳಂಕ-ತಲ್ಲಣ, ಭೀತಿ ೨, ೨ ವ

ತಾರ್ಕ್ಷ್ಯ-ಗರುಡ ೪, ೧೩೨

ತಿಬ್ಬಂ-ತೀವ್ರವಾಗಿ ೪, ೪೦

ತುಂಗಭದ್ರೆ-(೧) ಅತ್ಯಂತ ಮಂಗಲಸ್ವರೂಪೆ (೨) ನದಿಯ ಹೆಸರು ೧, ೩

ತುಂಡ-ಬಾಯಿ ೪, ೧೬

ತುರೀಯ ಪರಬ್ರಹ್ಮಸ್ಥಿತಿಯಲ್ಲಿರುವಂತಹ ೨, ೯೮

ತುಱುಗಿ-ಗುಂಪಾಗಿ ೪, ೧೭ ವ

ತುಱಿಲ್-ಪರಾಕ್ರಮ ೫, ೯

ತೆಗೞ್-ನಿಂದಿಸು ೧, ೧೫

ತೆಮರ್ವ-ನಾಶಗೊಳಿಸುವ ೫, ೪೦

ತೊಂಗಲ್-ಗೊಂಚಲು ೨, ೪೦

ತೊಂಡುಗೆಡೆ-ಚಪ್ಪರಿಸು ೧, ೫೨

ತೋಡಿಲ್ಲದ-ಅಪಮಾನವಾದ ೪, ೨೪ ವ

ತ್ವಿಡ್-ಪ್ರಕಾಶ ೨, ೨೩

## ದ

ದಂಡೆ-'ಬಿಲುವಿಡಿದು ನೂಕುವ ಕರಂ' ೪, ೫೯

ದಿವಿಷನ್ಮಣಿ-ಚಿಂತಾಮಣಿ ೫, ೬೧

ದೂವೆ (ಸಂ. ಧೂಮ)-ಹೊಗೆ ೨, ೪೮

ದೇವರ-ಮಯ್ದುನ ೨, ೧೧೫

ದೋರ್ಬಲ-ಭುಜಬಲ ೪, ೨೭

ದ್ವಿಶಿರ-ಭೇರುಂಡ ೨, ೬೫

## ಧ

ಧರ್ಮ-ಧನುಸ್ಸು ೪, ೧೬

ಧನಂಜಯ-ಅಗ್ನಿ ೪, ೪೪

ಧೀಪರ-ಜಾಲಗಾರ ೪, ೧೦

## ನ

ನಗ-ಗಿಡು ೧, ೩೫

ನಣ್ಪು-ಪ್ರೀತಿ ೨, ೩೯

ನವಿರ್-ಕೂದಲು ೪, ೧೧೨

ನಾಕಿ-ದೇವತೆ ೧, ೩೨

ನಾನಲ್-ಗಲಗಿನ ಜುಡುಂಪು ೪, ೨೩

ನಾರಾಚ-ಉದ್ದವಾದ ಬಾಣ ೩, ೨೩

ನಿಕುಂಜ ಜುಡುಪು ೩, ೩೫

ನಿಕ್ಕುವಂ-ನಿಶ್ಚಯ ೫, ೩೨

ನಿಗ್ಗವ-(ಆನೆಯ) ದಂತ ೩, ೨೭

ನಿಚೋಳ-ಕುಪ್ಪಸ ೩, ೯

ನಿತಂಬ-(ಪರ್ವತದ) ಇಳಕಲು ೪, ೨

ಪೀಲಿ-ನವಿಲುಗರಿ ೩, ೯
ಪುಂಖ-ಬಾಣದ ಹಿಂಭಾಗ, ಕೆಯ್ಪೊಡೆ ೪, ೪೨
ಪುಂಗವ-ವೃಷಭ ೫, ೨೬
ಪುರುಡಿಸು-ಮೀರಿಸಬಗೆ ೪, ೪೧
ಪುಷ್ಕರ-ಆಕಾಶ ೫, ೨೯
ಪುಳಿಂದ-ಬೇಡ ೩, ೬೩ ವ
ಪುಱಿಲ್ (ಸಂ. ಪುಲಿನ)-ಉಸುಕು ೧, ೩೪
ಪುಱಿವಚ್ಚೆ-ಹುಳುವಿನ ಹಸುರುಬಣ್ಣದ ರೆಕ್ಕೆ ೩, ೯
ಪೂಣ್-ಪ್ರತಿಜ್ಞೆಮಾಡು ೨, ೯೧ ವ
ಪೃಥು (ಳ)-ಬಹಳ, ದೊಡ್ಡ ೨, ೮೫
ಪೆಳಱ್-ಹೆದರು ೧, ೩೯
ಪೇರಡಿ-ನಾಯಿ ಸೊಬಗ ೩, ೨೩
ಪೊಗರ್-ಪ್ರಕಾಶ ೪, ೧೯
ಪೊಂಗು-(ನೆಯ್ಯ್) ಹಿಗ್ಗಿಸು ೪, ೧೨
ಪೊಡರ್-ಶೋಭಿಸು, ಸ್ಫುರಿಸು ೩, ೧೩
ಪೊಡರ್ಪು-ಪ್ರಸಿದ್ಧಿ ೧, ೩೪; ಶಕ್ತಿ ೨, ೯೪
ಪೊಡೆ-ಹೊಟ್ಟೆ ೪, ೭೯
ಪೊಣರ್-ಜೋಡು ೧, ೪೬
ಪೊಣರ್ಕೆ-ಹೋರಾಟ ೪, ೮೬
ಪೊದಱ್-ಪ್ರಕಟವಾಗು, ಹುಟ್ಟು ೧, ೧೦
ಪೊರೆ(ಹೊರೆ)-ಸಮೀಪ ೫, ೧೨
ಪೊರೆಯೇಱು-ಆನಂದದಿಂದ ಉಬ್ಬು ೧, ೭೯ ವ
ಪ್ರಕೃತಿ-ಸ್ವಭಾವ ೧, ೪೪
ಪ್ರಣಿಧಿ-ಗೂಢಚರ ೩, ೩೭
ಪ್ರತಿಮಾನ-ಆನೆಯ ದಂತವೆರಡರ ನಡುವಿನ ಭಾಗ ೩, ೪೨
ಪ್ರಪತ್ತಿಯಿಂ-ಶರಣಾಗತನಾಗಿ ೨, ೧೧೭
ಪ್ರಭಂಜನ-ಬಿರುಗಾಳಿ ೨, ೪
ಪ್ರಸ್ಫುರಿತ-ಚೆದರಿಸಿದ ೪, ೨೯
ಪ್ರಾಂಚತ್-ಶೋಭಿಸುವ ೪, ೧೦೯

### ಬ

ಬಂಕೆ-ಮೂಲೆ ೧, ೬೭
ಬಂಚರ-ವೀಣೆ, ತಂಬೂರಿ ೨, ೪೨ ವ
ಬರಿ-ಪಕ್ಕೆ ೪, ೧೫
ಬಱಿ-ಬತ್ತು, ಹಿಂಗು ೪, ೮೯
ಬರ್ಹ-ನವಿಲುಗರಿ ೨, ೬೫
ಬಲಾಹಕ-ಮೇಘ ೪, ೨೯
ಬವರಿವರಿ-ಸುತ್ತುವರಿ ೪, ೧೭ ವ
ಬಜಲ್-ಜೋಲು, ಸಡಿಲು ೩, ೭
ಬಜಲ್ಚು-ಸೋರಿಸು, ಹಿಂಡು ೫, ೩
ಬಾಗಿಲ್ವಾಡ-ಪುರದ್ವಾರ, ಗೋಪುರ ೧, ೬೧
ಬಾಯ್ದೆರೆ-ತುಟಿ ೪, ೪೨ ವ
ಬಾಳೆ-ಮೀನು ೨, ೫೧
ಬಿದಿರ್ಚು-ಬಿಚ್ಚು, ತಪ್ಪಿಸು ೪, ೧೦
ಬಿನ್ನಣ-ಜಾಣತನ ೪, ೧೦
ಬಿಸಕಾಂಡ-ತಾವರೆಯ ದೇಟು ೩, ೪೪
ಬಿತ್ತು-ಬೀಜ ೨, ೪೨ ವ
ಬೀ ತೀರು, ಒಣಗು ೪, ೮೯
ಬಿಡೆವಿರಿ ಬಿರಿ ೨, ೪೨ ವ
ಬೂತಾಟ-ಮೋಸ ೪, ೯೭
ಬೆಕ್ಕಸಮುತ್ತು-ಅತ್ಯಾಶ್ಚರ್ಯಪಟ್ಟು ೫, ೬೨
ಬೆಚ್ಚ-ಬೆಸೆದ ೨, ೧೦೨
ಬೆಸನ-ಆಜ್ಞೆ ೨, ೪೨ ವ; ವ್ಯಸನ ೨, ೯೦
ಬೆಳ್ಪಳಿಸು-ಕಳವಳಿಸು ೪, ೧೧೩
ಬೆಳ್ವಾರ-ಬಲೆ ೩, ೨೫
ಬೇವಸ-ಚಿಂತೆ, ದುಮ್ಮಾನ ೪, ೯೧

### ಭ

ಭಂಗ-(೧) ಕೇಡು, ಅವಮಾನ (೨) ಸಮುದ್ರದ ತೆರೆ ೧, ೩೨
ಭರಿಕೆಯ್-ಸೊಂಡಿಲು ೩, ೫೮
ಭರ್ಮ-ಭಂಗಾರ ೧, ೫೫
ಭವಾಮಯ-ಭವವೆಂಬ ರೋಗ ೫, ೨೨
ಭಾಜನ-ಪಾತ್ರ ೪, ೧೨೫
ಭುಜಂಗ-ವಿಟ ೨, ೪೨ ವ
ಭೃಂಗಾರ-ಕಲಶ ೧, ೭೯ ವ
ಭೃತ-ಧರಿಸಿದ ೧, ೫೮, ರಕ್ಷಿಸಿದ ೫, ೪೭
ಭೇಕ-ಕಪ್ಪೆ ೧, ೧೩
ಭೋಗಿ (ಹೆಡೆಯುಳ್ಳದ್ದು)-ಸರ್ಪ ೧, ೮೨

ಭ್ರಾಜಿಷ್ಣು-ಪ್ರಕಾಶವುಳ್ಳ ೧, ೧
ಭ್ರುಕುಟಿ-ಹುಬ್ಬುಗಂಟು ೪, ೨೧

### ಮ

ಮಡಲ್-ಪಸರಿಸು, ಹಬ್ಬು ೪, ೧೧೨
ಮನೋಗದ-ಚಿಂತೆ, ದುಃಖ ೪, ೧೧೩
ಮರಂದರಸ-ಮಕರಂದರಸ ೨, ೩೯
ಮರಲ್-ಮರಳು, ಹಿಂದಿರುಗು ೪, ೧೨
ಮರುತ್-ದೇವತೆಗಳು ೨, ೪೩
ಮರೆ-ಚಿಗರೆ ೩, ೨೮
ಮಱುಜವಣಿ ಸಂಜೀವನ ವನಸ್ಪತಿ ೩, ೩೦
ಮರ್ಚು-ಮೆಚ್ಚು ೨, ೪೭
ಮಲ್ಲಱಿಗೊಳ್-ತಳಮಳಿಸು, ಚೆದರು ೨, ೨ ವ
ಮಶಕ-ನೊರಜು, ಸೊಳ್ಳೆ ೪, ೪೫
ಮಸಕ-ಪ್ರಭಾವ, ಪ್ರಬಲತೆ, ೨, ೨ ವ
ಸಿಟ್ಟು ೪, ೩೮
ಮಸಗು-ಆವರಿಸು ೧, ೪೦
ಮಹಿತ-ಯೋಗ್ಯವಾದ ೨, ೨೬
ಮಾಣಿಸು-ನಿಲ್ಲಿಸು ೧, ೨೯
ಮಾತಂಗ-ಆನೆ ೨, ೫೫
ಮಾಧವ-ವಸಂತ; ವಿಷ್ಣು ೧, ೨
ಮಾನ ಅಳತೆ ೩, ೫೩
ಮಾಮಸಕ-ಸಂಭ್ರಮ ೩, ೫೫
ಮಾರ್ಗಣ-ಬಾಣ ೪, ೧೯
ಮಿಗದೇರ-ವಾಯು ೧, ೩೯
ಮಿಗಬೇರ (ಸಂ. ಮೃಗವೈರ=ವ್ಯಾಘ್ರ)-
ವ್ಯಾಘ್ರಾಸುರ ೫, ೯
ಮಿಡಿ-ಹಿಮ್ಮಡ ೪, ೧೭ ವ
ಮಿಹಿರ-ಸೂರ್ಯ ೨, ೬
ಮಿಳಿರ್-ತೂಗಾಡು ೩, ೪೨
ಮಿಳ್ಳಿಱಿ-ಅತ್ತಿಂದಿತ್ತ ಚಲಿಸು ೩, ೬೨
ಮುಡಃಪು-ಭುಜದ ಮೇಲ್ಭಾಗ ೪, ೭೯
ಮೂಡಿಗೆ-ಬತ್ತಳಿಕೆ ೪, ೨೪ ವ
ಮೃಗಮದ-ಕಸ್ತೂರಿ ೨, ೮೧
ಮೇಚಕಿತ-ಕಪ್ಪಾದ ೨, ೫೩
ಮೊಕ್ಕಳ-ಬಹಳ, ವೆಗ್ಗಳ ೪, ೧೧

### ಯ

ಯಮಿ-ತಪಸ್ವಿ ೪, ೧೦೩

### ರ

ರಜನೀ ಅರಸಿಣ ೨, ೪೨ ವ
ರತ್ನಗರ್ಭೆ ಭೂದೇವಿ ೨, ೪೨ ವ
ರಥಂತರ-ವೇದದೊಳಗಿನ ಶಿವಸ್ತವನಮಂತ್ರ
೧, ೭೯ ವ
ರಥಾಂಗ-ಚಕ್ರವಾಕ ೧, ೫೩;
ಚಕ್ರ ೫, ೨೬
ರಸನೆ-ನಾಲಗೆ ೧, ೨೧
ರಸಾರುಹ-ಮರ ೨, ೪೨ ವ
ರಸಾಲ-ಮಾವು ೨, ೪೨ ವ
ರಾಕಾ-ಪೂರ್ಣ ೧, ೪
ರಿಂಗಣ-ನೃತ್ಯ ೫, ೩೭
ರುಕ್-ಪ್ರಕಾಶ ೫, ೨೬
ರುರು-(೧) ಚಿಗರೆ (೨) ಋಷಿಯ
ಹೆಸರು ೩, ೨೯
ರೇಶ-ಕುಬೇರ ೫, ೨೭
ರೋಮಶ-ಬಹಳ ಕೂದಲುಳ್ಳ ೧, ೬೬
ರೋಲಂಬಿ-ತುಂಬಿ ೨, ೫

### ಱ

ಱೊಪ್ಪು-ಗರ್ಜಿಸು ೪, ೧೨

### ಲ

ಲತಾಂತ-ಹೂ ೨, ೬೩
ಲಾಸ್ಯ-ನರ್ತನ ೨, ೪೬
ಲುಬ್ಧಕ-ಬೇಡ ೪, ೧೪
ಲುಲಾಯ-ಕೋಣ ೩, ೪೬
ಲುಳಿ-ಚಳಕ ೪, ೮೦

### ವ

ವನ್ಯ-ಕಾಡಿನ ೨, ೪೨ ವ
ವಪ್ರ-ಪರ್ವತದ ತಪ್ಪಲು ೧, ೭
ವಪ್ರಕೀಡೆ-ಆನೆ, ಹೋರಿ ಮುಂತಾದವುಗಳ
ಕಲೆಯಿಂದ ಹಾಯುವ ಆಟ ೧, ೭
ವಲ್ಲಕಿ-ವೀಣೆ ೧, ೭೯ ವ
ವಸ್ತುಕ-ಚಂಪು ೫, ೫೯

ವಹಿತ್ರ-ಹಡಗ ೫, ೩೨
ವಳಕ್ಷ-ಬಿಳಿಯಬಣ್ಣ ೧, ೬೫
ವಾರ-ಸಮೂಹ ೫, ೨೦
ವಾರ್ಧರ-ಮೋಡ ೧, ೩೫
ವಾಸಿ-ಪಂತ, ಪಣ ೪, ೩೬
ವಿಕಚ-ಅರಳಿದ ೨, ೪೨
ವಿತರ್ದಿ-ಕಟ್ಟೆ, ಜಗಲಿ ೧, ೭೦
ವಿದ್ರುಮಲತಾಭ-ಹವಳದ ಬಳ್ಳಿಯಂತೆ ಶೋಭಿಸುವ ೫, ೨೯
ವಿಧುಂತುದ-ರಾಹು ೩, ೩೯
ವಿಶಿಖ-ಬಾಣ ೪, ೧೨೮
ವಿಸಟಂಬರಿ-ಯಥೇಷ್ಟವಾಗಿ ಹರಿ ೧, ೭೭
ವಿಸರ-ಸಮೂಹ ೨, ೪೨ ವ
ವೃಂತ-ಬೀಸಣಿಕೆ ೩, ೬೪
ವೈಶ್ವಾನರ-ಅಗ್ನಿದೇವತೆ ೫, ೩೫

## ಶ

ಶಣ-ಸಣಬು ೩, ೨೫
ಶಂಬ-ವಜ್ರ ೫, ೧೭
ಶಂಬರವಿಪಕ್ಷ-ಮದನ ೨, ೫
ಶರಭಂಗ-(೧) ಬಾಣದ ತುಣುಕು (೨) ನೀರಿನತೆರೆ ೨-೫೨
ಶಾಖಾಚರ-ಕಪಿ ೪, ೭೫
ಶಾಖಾಮೃಗ-ಕಪಿ ೧, ೧೫
ಶಾಲ-ಕೋಟೆಯ ಗೋಡೆ ೧, ೫೪
ಶಿಖಾವಹ-ಬೆಂಕಿ ೨, ೪೨ ವ
ಶಿಳೀಮುಖ-(೧) ಬಾಣ (೨) ತುಂಬಿ ೨, ೫೨
ಶೈಲಾದಿ-ನಂದೀಶ್ವರ ೨, ೨ ವ
ಶೈವಲ-ಹಾವಸೆ ೩, ೪೩
ಶ್ಮಶ್ರು-ಮೀಸೆ, ಗಡ್ಡ ೪, ೩೯

## ಷ

ಷಂಡ-ಸಮೂಹ ೧, ೮೧

## ಸ

ಸಂರಂಭ (ಸಾರಂಭ)-ಸಂಭ್ರಮ, ರೋಷ ೪, ೧೫ ವ
ಸಂವರ್ತ-ಪ್ರಳಯ ೪, ೧೭ ವ
ಸಂಶ್ರಯ-ಆಶ್ರಯ ೫, ೧೬
ಸಂಕ್ರಂದನ-(=ಇಂದ್ರ) ವೈರಿ-ರಾಕ್ಷಸ ೪, ೨೦
ಸಂಗಳಿಸಿದ-ಕೂಡಿಕೊಂಡ ೨, ೪೨ ವ
ಸಂಚುವೆತ್ತ-ಕಲಾಪೂರ್ಣವಾದ ೩, ೩೫ ವ
ಸತ್ತ್ವ-ಪ್ರಾಣಿ ೪, ೭
ಸದರ-ಸುಲಭ ೪, ೬೧
ಸದ್ವೃತ್ತ-(೧) ದುಂಡಾದ (೨) ಒಳ್ಳೆಯ ವರ್ತನವುಳ್ಳ ೧, ೨೮
ಸಂದೃಪ್ತ-ಮತ್ತ ೩, ೫೭
ಸಪತ್ನ-ಹಗೆ ೪, ೬೯
ಸಬ್ಬವಕಾರ-ಮೇಳದವ ೩, ೨
ಸಮುದಂಡಿಯೊಳ್-ಸಂಜೋಡಿಯಾಗಿ ೪, ೬೬
ಸರವಿ-ಹಗ್ಗ ೨, ೮೧
ಸರಳಿಸು-ಜಿಗಿ, ಹಾರು ೩, ೪೮
ಸರಿ-ಮಳೆ ೪, ೬೨
ಸವಗ-ಕವಚ ೨, ೧೦೮
ಸವಿಧ-ಸಮೀಪದ ೨, ೬೬
ಸಾಧ್ವಸ-ಭಯ ೪, ೬೨
ಸಾಮಜ-ಆನೆ ೨, ೪೬
ಸಾರಮೇಯ-ನಾಯಿ ೩, ೨೫
ಸಾರಸಾರಸ-ಕಮಲ ೫, ೨೭
ಸಾರ್ಕೆ-ಸಮೀಪ ೨, ೧೪
ಸಿಡುಂಬು-ಮುಳ್ಳು, ಕಂಟಿ ೪, ೨೩
ಸಿತಗ-ಕ್ಷುಲ್ಲಕ ೨, ೮೬
ಸುಂಟಿಡು-ಸುತ್ತು ೨, ೬೮
ಸುತ್ರಾಮ-ಇಂದ್ರ ೫, ೨೫
ಸುಪರ್ವ-ದೇವತೆ ೪, ೨
ಸುಬಗ-ಸುಂದರ ೧, ೨೬
ಸುಮನ(ಸ್)-(೧) ದೇವತೆಗಳು (೨) ಹೂ ೧, ೨೮
ಸುರಾಧ್ವ-ಆಕಾಶ ೨, ೩೮

